# ಮುಡಿಪು

"ಕಿಕ್ಕಿರಿ ತುಂಬಿದೆ ಭೂಮಿಯ ಕಣಜ.
ಕಕ್ಕಸ ಬಡುತಿದೆ ಬೊಕ್ಕಸದೊಡಲು.
ಬರಿದೋ ಬರಿದು ! ತೆರವೋ ತೆರವು !
ಬಡವರ ಬಗ್ಗರ ತುತ್ತಿನ ಚಿಲಾ !"

ಎಂಬ

ವಿಚಾರವನ್ನು ಪ್ರಚೋದಿಸುವ

**ಅಂತರ್ಯಾಮಿಯ**

ಅಡಿಗಳೆಡೆಯಲ್ಲಿ ಇಂಬು ದೊರೆಯಲಿದಕ್ಕೆ.

**'ಆನಂದಕಂದ'**

◁ ಜಯಕರ್ನಾಟಕ ಗ್ರಂಥಮಾಲೆಯ ಎಂಟನೆಯ ಪುಷ್ಪ. ▷

# ಬಡತನದ ಬಾಳು

( ಮೂರು ಕತೆಗಳು )

ಆನಂದಕಂದ

ಬೆಲೆ ಎಂಟು ಆಣೆ

೧೯೩೭

# ಮುನ್ನುಡಿ

'ಬಡತನದ ಬಾಳು' ಎಂದರೆ ಮೈಗೆ ಮುಳ್ಳು ಬರುವವು. ಮಹಾರೋಗಿಯನ್ನು ಮುಟ್ಟಿಸಿಕೊಳ್ಳದಂತೆ ಬಡತನದ ಸ್ಪರ್ಶವೂ ತಮಗಾಗಬಾರದೆಂದು ಎಲ್ಲರೂ ಯತ್ನಿಸುವರು. ಆದರೆ 'ಬಡತನವೆಂಬುದು ಕಡೆತನಕಿರಲಿ' ಎಂದು ಹಾಡಿಕೊಂಡ ದಾಸರುಂಟು. ಇದು ದಾಸರ ಮಾತು—ಎಂಬುದನ್ನು ನಾವು ಮರೆಯಬಾರದು. 'ಎಲ್ಲರಿಗೂ ಬಡತನವು ಬಡಿದುಕೊಳ್ಳಲಿ ದೇವ' ಎಂದು ಅವರು ಹಾಡಿಲ್ಲ. 'ಸೂಜಿಯ ಕಣ್ಣೊಳಗಿಂದ ಒಂಟೆ ಹಾಯ್ದು ಹೋಗಬಹುದು; ಆದರೆ ಸ್ವರ್ಗದ ಹೆಬ್ಬಾಗಿಲೊಳಗಿಂದ ಸಿರಿವಂತನು ಹಾಯ್ದು ಹೋಗಲಾರನು' ಎಂದುಸುರಿದ ಮಾತಿನಲ್ಲಿ ಮೂಡಿದ್ದು ಬಡತನದ ಮೇಲುತನವಲ್ಲ, ಸಿರಿವಂತಿಕೆಯ ಕೀಳುತನ. ಬೇರೆ ಮನೆಗಳು ಹಾಳು ಆದಂತೆ, ಒಂದು ಮನೆಯ ಅಂತಸ್ತು ಏರುವದು. ಹೀಗೆ ಉಳ್ಳವರಾಗುವದಕ್ಕಿಂತ ಇಲ್ಲದವರಿರುವದು ಲೇಸು—ಎಂಬುದು ತಾರತಮ್ಯದ ಮಾತು. 'ಬಡತನವು ನನಗಿರಲಿ ಭಾಳ ಮಕ್ಕಳಿರಲಿ! ಮೇಲೆ ಗುರುವಿನ ದಯವಿರಲಿ' ಎಂಬ ಕರುಣಾಗೀತದಲ್ಲಿ ಗುರುವಿನ ದಯವಿರದಿದ್ದರೆ ಬಡತನವು ದಕ್ಕುವದಲ್ಲವೆಂದೇ ಸೂಚಿತವಾಗಿದೆ. ಇಷ್ಟೇಕೆ? ಬಡತನವೇ ದಿವ್ಯವೆಂದು ಹೇಳುವದಿದ್ದರೆ ವಿಷ್ಣುವಿನ ಹೆಂಡತಿಯು 'ಇದಿ' ಯಾಗಿರಬೇಕಾಗಿತ್ತು; ಲಕ್ಷ್ಮಿಯಲ್ಲ.

ಬಡತನವು ಅವರವರ ಪಾಪದ ಫಲವೆಂಬ ಒಂದು ಗ್ರಹಿಕೆಯಾಗಿ ಬಿಟ್ಟದ್ದರಿಂದಲೆ, ಇದುವರೆಗೂ ಯಾರೂ ಅದನ್ನು ನಿರ್ನಾಮವಾಗಿ ಮಾಡಲು ಪ್ರಯತ್ನಪಟ್ಟಿಲ್ಲ. ಒಂದು ಸಮಾಜದಲ್ಲಿ ಬಡವರಿರುವದು ಆ ಸಮಾಜಕ್ಕೆ ಕೊರತೆ. ಬಡತನವು ಸಾಂಕ್ರಾಮಿಕರೋಗ, ಆದರೆ ಪ್ಲೇಗುಗೀಗುಗಳಂತಲ್ಲ. ಪ್ಲೇಗಿನ ಸಂಪರ್ಕದಿಂದ ಪ್ಲೇಗೇ ಬರುವದಲ್ಲದೆ ಕಾಲರಾ ಬರಲಾರದು. ಆದರೆ ಬಡತನವು ಒಂದು

ವಿಚಿತ್ರ ರೋಗ. ಬಡವರು ದೀನರಾದಂತೆ ಬಲ್ಲಿದರಲ್ಲಿ ಸೊಕ್ಕು ಹೆಚ್ಚು. ಅವರು ದಿಟ್ಟರಾದರೆ, ಇವರಿಗೆ ಹೆದರಿಕೆ. ಅವರು ಹಕ್ಕಿನ ತಿರುಕರಾದರೆ, ಇವರು ಶಾಸ್ತ್ರದ ಧಾರ್ಮಿಕರು. ಅವರು ನಿರುಪದ್ರವಿಗಳಾದ ಕೂಲಿಕಾರರಾದರೆ, ಇವರು ಜಂಭದ ಪರೋಪಕಾರಿಗಳು. ಅಂತೂ ಅವರಿಗೊಂದು ವಿಕಾರ; ಇವರಿಗೊಂದು ವಿಕಾರ. ಒಂದು ಗುಣವಾಗದೆ ಇನ್ನೊಂದು ಗುಣವಾಗದು. ಬಡತನವು ಸಾಮಾಜಿಕಪಾಪವೆಂದು ತಿಳಿಯದ ಹೊರತು ಮನುಷ್ಯನಿಗೆ ಮುಂದೆ ಗತಿಯಿಲ್ಲ. ಬಡತನವು ಅವರವರ ಪಾಪದ ಫಲವೆಂಬುದು ತ್ರೇತಾಯುಗದಲ್ಲಿರಬಹುದು, ಈ ಯುಗದಲ್ಲಿ ಅಲ್ಲ. ಭೂಮಿತಾಯಿಯು ಬಡವಿಯಲ್ಲ. ಅವಳು ಕಾಳಿನ ಕಣಜ; ಹಣದ ಕಣಿ. ಅವಳ ಮಕ್ಕಳಿಗೆ ಬಡತನವೆಂದರೇನು? ಮೈಗಳ್ಳತನದಿಂದಲೇ ಬಡತನವು—ಎಂಬ ಮಾತಿನಲ್ಲಿ ಸತ್ಯಕ್ಕಿಂತ ಸುಳ್ಳೇ ಹೆಚ್ಚಾಗಿದೆ.

ಬಡವರನ್ನು ದುಡಿಯುವವರನ್ನು ಎಲ್ಲಿಯೂ ಕಾಣಲಾರೆವು. 'ಬಲ್ಲವರೆ ಬಲ್ಲಿದರಾಗುವರು, ಬರಿ ಕೋಣನಂತೆ ದುಡಿದರೇನು?' ಎಂದೂ ಕೇಳಬಹುದು. ಸರಿ, ಇಲ್ಲಿ ಬಲ್ಲವರೆಂದರೆ ದುಡ್ಡು ಸೆಳೆದುಕೊಳ್ಳಲು ಬಲ್ಲವರು - ಎಂದು ಅರ್ಥ ಮಾಡಿದರೆ ಮಾತ್ರ ಸರಿಹೋಗುವವು, ಬಲ್ಲವರು ಎಂದರೆ ತಿಳುವಳಿಕೆಯನ್ನು ಹರಡಬಲ್ಲವರು, ಗಂಟು ಕಟ್ಟಬಲ್ಲವರಲ್ಲ; ಇವರು ತಮ್ಮ ಬೇಳೆಬೇಯಿಸಿಕೊಳ್ಳಬಲ್ಲವರು. ಏನೆ ಇರಲಿ, ಬಡತನವು ಸಾಮೂಹಿಕಪಾಪವೆಂಬ ತಿಳುವಳಿಕೆಯು ಬೇರೂರಿ ಬೆಳೆದು, ಬಲಿತು ಇಂದು ಬಡತನವನ್ನು ಬೇರುಸಹಿತ ಕಿತ್ತೊಗೆಯಲು ನಿಂತಿದೆ. ಈ ತಿಳುವಳಿಕೆಗೇ ಸಮಾಜಸತ್ತಾವಾದ, ಸಂಘವಾದ, ರಾಷ್ಟ್ರವಾದ, ಸ್ವಾತಂತ್ರ್ಯವಾದ ಇತ್ಯಾದಿ ಹೆಸರು. ರೂಪದಂತೆ ನಾಮ. ಬೇಡಾದದ್ದು ಬೇತಾಳವೆಂಬಂತೆ ಬವೊಮ್ಮೆ ಅದಕ್ಕೆ 'ಬೊಲ್ಶೆವಿಜಮ್' ಎಂದೂ ಎನ್ನುವರು. ರೂಪವೇನೆ ಇರಲಿ, ಅದರ ನಾಮವೇನೆ ಇರಲಿ, ಬಡತನವನ್ನು ಭೂಮಿಯಿಂದ ಕಿತ್ತೊ

ಗೆಯುವದು—ಇನ್ನೊಮ್ಮೆ ಮೊಳೆಯುದಂತೆ, ಎಲ್ಲಿಯೂ ಮೊಳೆಯುದಂತೆ ಕಿತ್ತೊಗೆಯುವದು—ಅದರ ಸ್ವರೂಪ. ಇದೊಂದು ರುದ್ರಲೀಲೆ.

ಬಡತನ, ಅಲ್ಪಾಯುಷ್ಯ, ಅಜ್ಞಾನ ಇವು ಸಾಮಾಜಿಕಪಾಪ ಗಳು. ಅಜ್ಞಾನವು ಎಲ್ಲ ಪಾಪಗಳ ಬೀಜವೆಂದು ಹೇಳುವರು. ಆದರೆ ಬಡತನದ ಹೊಟ್ಟೆಯಲ್ಲಿ ಎಲ್ಲವೂ ಬರುವದು. ಬಡತನವನ್ನು ಭೂಮಿ ಯಲ್ಲಿರಿಸಗೊಟ್ಟದ್ದೆ ಜ್ಞಾನದ ಕೊರತೆ. ದಾನಧರ್ಮದಿಂದ ಸರಿಪಡಿಸಿ ಕೊಳ್ಳಲು ಬಡತನವು ತಿರುಕರ ಜೋಳಿಗೆಯಲ್ಲ; ಅದು ರುದ್ರನೊಡ್ಡಿದ ಕೈ. ಇಲ್ಲಿ ಬಡತನವಿರುವದರಿಂದಲೆ ಭೂಮಿಯ ಸೀಮೆಯನ್ನು ದಾಟಿ ಕೈಲಾಸವನ್ನು ಕಟ್ಟಬೇಕಾಯಿತು. ವ್ಯಕ್ತಿಯ ಧರ್ಮಸಾಧನಗಳಲ್ಲಿ ಶರೀರವೇ ಮೊದಲನೆಯದು. ಮಾನವಸಮಾಜದ ಧರ್ಮಸಾಧನ ಗಳಲ್ಲಿ ಬಡತನವನ್ನು ಕಳೆಯುವದೆ ಮೊದಲು. ಆದರೆ ಮಾನವನು ಬಹುರೂಪನಾಗಿದ್ದರಿಂದ ಮನುಷ್ಯನ ಸ್ವರೂಪವು ಹೊಳೆಯದಾಗಿದೆ. ಅವನ ಏಕರೂಪವು ಹೊಳೆದರೆ, ಒಬ್ಬನ ದೋಷವೂ ಎಲ್ಲದರೊಳಗಿನ— ಕೊರತೆ ಎಂಬುದು ಸ್ಪಷ್ಟವಾಗಬಹುದು. ಈ ಜ್ಞಾನದ ಉದಯವೆ ಆ ಶೌರ್ಯದ ಆರಂಭ.

ಗೆಳೆಯರಾದ 'ಆನಂದಕಂದ' ರು ತಮ್ಮ ಕಥೆಗಳಲ್ಲಿ ಬಡತನದ ರೋಗವನ್ನು ಬಯಲಿಗೆಳೆದು ಕಟ್ಟಿದ್ದಾರೆ. ಸಹೃದಯರು ಅದರ ಮೂಲವನ್ನು ತಿಳಿದುಕೊಂಡು, ಮಾರೆಮ್ಮನನ್ನು ಗಡಿದಾಟಿಸುವಂತೆ ಬಡತನವನ್ನು ಭೂಮಿಯ ಸೀಮೆ ದಾಟಿಸಬೇಕೆಂಬ ಉತ್ಸಾಹವನ್ನು ಬಂದಿಷ್ಟು ಪಡೆದರೆ, ಅದಕ್ಕೂ ಹೆಚ್ಚಿನ ಸಾರ್ಥಕತೆ ಇದೆಯೆ?

| ಸಾಧನಕೇರಿ<br>ಅಕ್ಷಯ್ಯತೃತೀಯೆ<br>ಶಾ. ಶಕೆ ೧೮೬೪ } | **ದ. ರಾ. ಬೇಂದ್ರೆ.** |
|---|---|

# ಒಂದೆರಡು ನುಡಿ

ನಮ್ಮ ಮಾಲೆಯ ಎಂಟನೆಯ ಗ್ರಂಥವಿದು; ಅಲ್ಲದೆ ಎರಡನೆಯ ವರುಷದ ಮೊದಲನೆಯ ಗ್ರಂಥವೂ ಅಹುದು. ಸಂಕಲ್ಪಿಸಿದಂತೆ ಸರಿಯಾದ ವೇಳೆಗೆ ಕನ್ನಡಿಗರ ಕೈಯಲ್ಲಿ ಒಪ್ಪಿಸಲಿಕ್ಕೆ ಆದುದರಿಂದ ನಮಗೆ ತುಂಬ ಆನಂದ. ಇದನ್ನೋದಿ ವಾಚಕರೂ ಆನಂದಪಟ್ಟರೆಂಬುದನ್ನು ಕೇಳಿದರಂತೂ, ಅಳತೆಯಿರದಷ್ಟು ಆನಂದ ನಮಗೆ. ತನ್ನ ಮಾಲೆಯನ್ನು ಮೆಚ್ಚುಗೆಯಿಂದ ಕೊಂಡು ಮುಡಿದುಕೊಂಡರೆ ಕಟ್ಟಿದ ಮಾಲೆಗಾತಿಗೂ ಹಿಗ್ಗು. ಹಣಕೊಟ್ಟು ತೆಗೆದುಕೊಂಡ ಸೊಗಸುಗಾತಿಗೂ ಹಿಗ್ಗು.

ನಾವು ಮೊದಲನೆಯವರ್ಷದಲ್ಲಿ ಪಟ್ಟ ಕಷ್ಟನಷ್ಟಗಳನ್ನು "ಉದ್ಧಾರ" ಎಂಬ ಪುಸ್ತಕದ ಮೊದಲಮಾತಿನಲ್ಲಿ ವಿವರಿಸಿದ್ದೇವೆ. 'ಈ ಕಷ್ಟನಷ್ಟಗಳೇ ನಮ್ಮ ಗುರಿಯನ್ನು ಕಾಣುವುದಕ್ಕೆ ಸಾಧನವು' ಎಂಬ ನಂಬುಗೆಯಿಂದ ಮತ್ತೆ ಕೆಲಸಕ್ಕೆಂದು ಮುಂದಡಿಯಿಟ್ಟಿದ್ದೇವೆ. ಕನ್ನಡಿಗರು ಈ 'ಬಡತನದ ಬಾಳಿ'ನಿಂದ ಮಾಲೆಯನ್ನು ಬಿಡುಗಡೆಗೊಳಿಸಿದರೆ ಅದು ನಿಶ್ಚಯವಾಗಿಯೂ ಅವರ ಗ್ರಂಥಸಂಗ್ರಹವನ್ನು ಹೆಚ್ಚಿಸುವುದು. ಸಂಸ್ಕೃತಿಯನ್ನು ಬಳೆಯಿಸುವುದು. ಮನಸ್ಸಿನ ಬೇಸರವನ್ನು ಕಳೆಯುವುದು. ಬುದ್ಧಿಯನ್ನು ತಿಳಿಯಾಗಿ ಮಾಡುವುದು. ಅಂತಃಕರಣವನ್ನು ಅರಳಿಸುವುದು.

ಈ ಪುಸ್ತಕದಲ್ಲಿ ಮೂರು ಕತೆಗಳಿವೆ. ಅವುಗಳಲ್ಲಿ ಬಡತನದ ಹಲವು ತೊಡಕುಗಳಲ್ಲಿಯ ಕೆಲವನ್ನು ಮಾತ್ರ ಚಿತ್ರಿಸಿ ತೋರಿಸಲಾಗಿದೆ. ಕತೆಯ ಭಾಷೆಯು ಸಾಮಾನ್ಯವಾಗಿ ಕನ್ನಡನಾಡಿನ ಎಲ್ಲ ಕಡೆಯವರಿಗೂ ತಿಳಿಯುವಂತಹದು; ಆದರೆ ಮೂರನೆಯ ಕತೆಯಲ್ಲಿಯ 'ಚಂದಮ್ಮ'ನ ಮಾತು, ಉತ್ತರಕರ್ನಾಟಕದ ಒಕ್ಕಲಿಗರ ಮನೆಮಾತನ್ನು ಅನುಸರಿಸಿದುದಾಗಿದೆ. ಅದರಲ್ಲಿಯ ಕೆಲಕೆಲವು

ಪದಪ್ರಯೋಗಗಳು ಇನ್ನಿತರ ಕನ್ನಡಿಗರಿಗೆ ಅಪರಿಚಿತವಾದುವುಗಳಾದರೂ, ಅರ್ಥವಾಗಲಾರದಂತಹವೇನೂ ಅಲ್ಲವೆಂದು ನಮ್ಮ ಭಾವನೆ.

ಮುಂದಿನ ಗ್ರಂಥವು **ಆಷಾಢಮಾಸದ ಮೊದಲನೆಯ ವಾರ**ದಲ್ಲಿ ಹೊರಡುವುದು. ಅದರ ಹೆಸರನ್ನು ಈಗಲೆ ತಿಳಿಸಲಾರೆವಾದರೂ, ಅದೊಂದು ಹೃದಯಾಕರ್ಷಕವಾದ **ನಾಟಕ**ವೆಂಬುದನ್ನು ಮಾತ್ರ ಹೇಳದಿರಲಾರೆವು.

ಮತ್ತೆ ಮತ್ತೆ ಹೇಳುವ ಮಾತೆಂದರೆ "ನಮಗೆ ನೆರವಾಗಿರಿ" ಎಂದು. ಒಮ್ಮೆಲೆ ಐವತ್ತು ರೂಪಾಯಿಗಳನ್ನು ಕೊಟ್ಟವರು ನಮ್ಮ ಮಾಲೆಯ ಆಜೀವ ಚಂದಾದಾರರಾಗುವರು. ಎಲ್ಲರಿಗೂ ತರಿಸಿ ಕೊಳ್ಳಲಿಕ್ಕೆ ಅನುಕೂಲವಾಗಬೇಕೆಂದು, ಹೋದ ವರುಷಕ್ಕಿಂತ ಈ ಸಲ ಚಂದಾಹಣವನ್ನು ಕಡಿಮೆ ಮಾಡಿರುವೆವು. ಆದುದರಿಂದ ಚಂದಾದಾರರಾಗಿ ಕನ್ನಡಿಗರು ನಮಗೆ ಹಣದ ನೆರವನ್ನೀಯಲಿ. ನಾವು ಅವರ ಮನಸ್ಸು ಬುದ್ಧಿ ಹೃದಯಗಳಿಗೆ ಪೌಷ್ಟಿಕವಾದ ಆಹಾರಗಳನ್ನೂ ಔಷಧಿಗಳನ್ನೂ ಒದಗಿಸುತ್ತೇವೆ.

"ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ"

ಸಾಧನಕೆರೆ
ತಾ. ೮-೬-೩೨

**ಪ್ರಕಾಶಕರು.**
ಜ. ಕ. ಗ್ರ. ಮಾ.

# ಬಡತನ

ಕುಲದೊಳ್ ಕೂಡರು,

ಕೂಸನೀಯರು;

ನೃಪರ್ ನಿಷ್ಕಾರಣಂ ದಂಡಿಪರ್.

ನೆಲೆಯೊಳ್ ಸೇರಲು ಪೋರುಗೈದು ಸತಿತಾಂ ಪೋಗಟ್ಟುವಳ್.

ಸಾಲಿಗರ್ ಕಲುಗುಂಡಂ ತಲೆಗೇರಿಪರ್.

**ತೊಲಗಿರಲ್ ಲಕ್ಷ್ಮೀಕಟಾಕ್ಷೇಕ್ಷಣಂ**

ನೆಲಮುಟ್ಟಲ್ ಮುನಿದಪ್ಪುದೈ !

ಹರಹರಾ! ಶ್ರೀಚೆನ್ನ **ಸೋಮೇಶ್ವರಾ** !

# ಪರಿವಿಡಿ

# ಈ ಚಿತ್ರ, ಆ ಚಿತ್ರ

೧

ರಾಷ್ಟ್ರೀಯ ಮಹಾಸಭೆಯು ನಡೆದು, ಬೆಳಗಾಂವಿಯ ಚಳಿಯು ಅಖಿಲಭಾರತಕ್ಕೂ ಪರಿಚಿತವಾಗಿದೆ. ಸಭೆಗೆಂದು ಬಂದಿದ್ದ ಪರಪ್ರಾಂತೀಯರೆಲ್ಲರೂ, ಗೌರೀಶಂಕರದಲ್ಲಿಯ ಹಿಮದೊಡನೆ ಹೋರಾಡಲು ಹವಣಿಸುವ ಅಲ್ಲಿಯ ಚಳಿಯನ್ನೂ, ನೀಲಾಕಾಶವನ್ನು ಜೆಂಬಣ್ಣಕ್ಕೆ ತಿರುಗಿಸುವ ಕೆಮ್ಮಣ್ಣುಹುಡಿಯನ್ನೂ ಕೊಂಡಾಡುತ್ತಲೆ ಸಾಗಿದರು. ಅಲ್ಲಿಗೆ ಬಂದವರಿಗೆ ಚಳಿನೆಣ್ಣು ಮಾಡಿದ ಆದರೋಪಚಾರವು ಆಜನ್ಮವೂ ಮರೆಯದಂತಹದು. ಪರದಾರಸೋದರರಾದ ಅಭ್ಯಾಗತರು ಈಕೆಯ ಸೋಂಕಿಗೆ–ಸಹವಾಸಕ್ಕೆ ಅಸಹ್ಯಪಟ್ಟುಕೊಂಡು ಐದಾರು ಉಣ್ಣೆಯ ಬಟ್ಟೆಗಳ ಮುಸುಕಿನಲ್ಲಿ ಅಡಗಿರುತಿದ್ದರೂ, ಕರ್ತವ್ಯಪರಾಯಣಳಾದ ಚಳಿಯಮ್ಮನು ಹುಡುಕಿ ಹುಡುಕಿ ಹೋಗಿ, ಮುಸುಕಿನೊಳಕ್ಕೆ ನುಗ್ಗಿ, ತನ್ನ ಮೆಲುಗೈಗಳಿಂದ ಅವರ ಮೈದಡವಿ, ಮೈಯ ನವಿರನ್ನು ನಿಮಿರಿಸಿಬಿಡುತ್ತಿದ್ದಳು. ಇಂತಹ ಏಕನಿಷ್ಠೆಯ ಸೇವೆಗಾಗಿ ಜನರೂ ಮೆಚ್ಚಿ, ಕ್ಷಣಹೊತ್ತು ತಮ್ಮ ನಿಶ್ಚಯವನ್ನು ಮರೆತು ಬಿಟ್ಟು, ಆಕೆಯನ್ನು ಎರಡುಕೈಗಳಿಂದಲೂ ಬಿಗಿಯಾಗಿ ಅಪ್ಪಿಕೊಳುತ್ತಿದ್ದರು. ಚಳಿನೆಣ್ಣಿನ ಕರ್ತೃತ್ವಶಕ್ತಿಯನ್ನು ಕೇಳದ—ಕಾಣದ ಬಯಲುಸೀಮೆಯವರು ಪಟ್ಟ ಸೌಖ್ಯವಂತೂ ಅಸಾಮಾನ್ಯವಾದುದು. ಅಡಗಿಕೊಳಲಿಕ್ಕೆ ಉಣ್ಣೆಯ ಹೊದ್ದಿಕೆಗಳ ಅಭಾವ ಅವರಲ್ಲಿ. ಚಳಿಯಮ್ಮನ ಸೇವಾ–ಶುಶ್ರೂಷೆಯನ್ನು ಪೂರ್ಣವಾಗಿ ಪಡೆದವರೆಂದರೆ ಇವರೇ. ಸಂಜೆಯ ಐದುಗಂಟೆಯಿಂದ ಬೆಳಗಿನ ಎಂಟುಗಂಟೆಯವರೆಗೆ ಯಾರು

ಮಾತನಾಡಿದರೂ, ನಮ್ಮ ನಾಟಕ ಕಂಪನಿಗಳಲ್ಲಿಯ ಮುಖ್ಯನಟನು ಹಾಡಿದಂತೆ ಕೇಳುತಿದ್ದಿತು. ಕೈಯನ್ನು ಹೊರಕ್ಕೆ ತೆಗೆದು ತಿರುಗು ವವರು ಒಬ್ಬರೂ ಕಣ್ಣಿಗೆ ಬೀಳುತ್ತಿರಲಿಲ್ಲ. “ ಕೈತೋರಿಸಿ ಅವ ಲಕ್ಷಣವೆಂದೇಕೆ ಹೇಳಿಸಿಕೊಳಬೇಕು ? ” ಎಂಬ ಮಾತನ್ನು ಎಲ್ಲರೂ ಲಕ್ಷ್ಯದಲ್ಲಿಟ್ಟುಕೊಂಡಿರುವಂತೆ, ಎಲ್ಲರ ಕೈಗಳೂ ಜೇಬುಗಳಲ್ಲಿ ಮರೆ ಯಾಗಿರುತ್ತಿದ್ದುವು. ಜೇಬು ಇಲ್ಲದವರನ್ನು ನೋಡಿದರೆ, ಅವರ ಎಡಗೈ ಬಲದಕಂಕುಳಲ್ಲಿ; ಬಲಗೈ ಎಡದಕಂಕುಳಲ್ಲಿ. ಎಳೆಮಕ್ಕಳಂತೆ ಎಲ್ಲರದೂ ಮುಚ್ಚಿದ ಮುಟ್ಟಿಗೆ. ಚಹಾ ಕಾಫಿಗಳ ಪಾಲಕರು ಚಳಿ ದೇವಿಗೆ ವಿರೋಧವಾಗಿ ನಡೆದು, ಜನರ ಪ್ರೀತಿಯನ್ನು ತಾವು ಸಂಪಾ ದಿಸಬೇಕೆಂದು, ಜೀವದ ಹಂಗುದೊರೆದು ಹೆಣಗಿದರು. ಕೊನೆಗೆ ಅವರೂ ಸೋತು ಆಕೆಯ ಪಾದದೆಡೆಯಲ್ಲಿ ನಡುಗುತ್ತ ಒಂದು ಬೀಳಬೇಕಾ ಯಿತು. ಈ ಎಲ್ಲ ಚಿತ್ರವನ್ನು ಪ್ರತ್ಯಕ್ಷವಾಗಿ ನೋಡಿದವರಿಗೆ ಈ ನನ್ನ ಮಾತುಗಳೇನೂ ಹೊಸವಲ್ಲ. ನೋಡದಿದ್ದವರಿಗೆ ಬೇಗನೆ ನನ್ನ ಮಾತಿನ ಅರ್ಥವಾಗದಿದ್ದರೆ, ಮಾರ್ಗಶೀರ್ಷ ಅಥವಾ ಪೌಷ್ಯಮಾಸ ದಲ್ಲಿ, ಬೆಳಗಾಂವಿಯ ನಗರವಿಸ್ತರಣ ( ಎಕ್ಸ್ಟೆನ್‌ಶನ್ ) ವಾದ ವಿಜಯನಗರದಲ್ಲಿದ್ದು, ಅನುಭವಿಸಿ ಅರ್ಥಮಾಡಿಕೊಳಬೇಕು.

ಇದೇ ಬಗೆಯದೇ ಒಂದು ಚಳಿಗಾಲ; ಪೌಷ್ಯಮಾಸ; ಬೇಗಿ ನಲ್ಲಿ ‘ ಬಿಸಿಲು ’ ಎಂಬ ಹೆಸರನ್ನು ಅನ್ವರ್ಥಕಮಾಡಿ ತೋರಿಸುವು ದಕ್ಕೆ, ಬೆಂಗದಿರನಾದ ಸೂರ್ಯನಿಗೂ ಚಳಿಯೊಡನೆ ಎರಡು ಗಂಟೆಯ ವರೆಗೆ ಹೋರಾಡಬೇಕಾಗುತಿದ್ದ ಕಾಲವದು. ಬೆಳಗಿನ ಬರುವನ್ನು ಲೋಕಕ್ಕೆ ತಿಳುಹಿಸಲೆಂದು ನಿಸರ್ಗವು ಸೃಷ್ಟಿಸಿದ, ದೇವವೈತಾಳಿಕ ರಂತಿರುವ ಹಕ್ಕಿಗಳ ಹಿಂಡೂ ಚಳಿಗೆ ಬೆದರಿ, ನಿಸರ್ಗಧರ್ಮವನ್ನು ಮೀರಿ ನಡೆಯುತ್ತಿರುವ ದಿವಸಗಳವು. ಬೆಳಗಾವಿಯ ನಗರವಿಸ್ತರ ಣದ ಉತ್ತರದ ಕಡೆಗೆ ನಾಲ್ಕಾರು ಹುಲ್ಲುಗುಡಿಸಿಲುಗಳು. ಒಂದು ಗುಡಿಸಿಲ ಮುಂದಿನ ಅಂಗಳದಲ್ಲಿ ಚಳಿಯನ್ನು ಕಳೆದುಕೊಳಲಿಕ್ಕೆ

ಹಚ್ಚಿದ್ದ ಉರಿಯು. ಉರಿಯುಕೂಡ ಚಳಿಯನ್ನು ಸಹಿಸಲಾರದೆಂದು ನೋಡುವವರಿಗೆನಿಸುವಂತೆ, ಬೆಳಗಿನ ಸುಳಿಗಾಳಿಗೆ ಕಂಪಿಸುತ್ತಲಿದೆ.

ಆ ಗುಡಿಸಿಲಿನ ಯಜಮಾನ ಮಾದಪ್ಪ. ಅಂಗಳದಲ್ಲಿ ಉರಿಯ ಸುತ್ತಲೂ ಕಾಯಿಸಿಕೊಳುತ್ತ ಕುಳಿತವರು ಮಾದಪ್ಪನ ಮಕ್ಕಳು. ಹಿರಿಯವನು ಹದಿಮೂರು ವರುಷದವನು. ತಾಯಿತಂದೆಗಳು ಪ್ರೇಮ ದಿಂದ 'ಲಕ್ಕಣ್ಣಾ' ಎಂದು ಅವನನ್ನು ಕೂಗುತಿದ್ದರು. ಉಳಿದವ ರಿಗೆಲ್ಲ ಆತನು ಲಕ್ಕಣ್ಣನಲ್ಲ. "ಲಕ್ಕ" "ಲಕ್ಯಾ". ಲಕ್ಕಣ್ಣನ ಮೈಮೇಲೆ ಲಂಗೋಟಿಯಹೊರತು ಬೇರೆ ಬಟ್ಟೆಯೆ ಇರಲಿಲ್ಲ. ಆತನ ಬಲಗಡೆಗೆ ಹುಲ್ಲುತರಗೆಲೆಗಳ ರಾಶಿಯೊಂದು. ನೂತನಬ್ರಹ್ಮಚಾರಿಯು ಪ್ರಾತಃಕಾಲದ ಅಗ್ನಿಕಾರ್ಯಕ್ಕೆ ಕುಳಿತಂತೆ, ಚೆನ್ನಾಗಿ ಆಸನಹಾಕಿ ಕುಳಿತಿದ್ದಾನೆ. ಆಗಾಗ ಹುಲ್ಲನ್ನು – ತರಗೆಲೆಗಳನ್ನು ಉರಿಗೆ ಆಹುತಿ ಯಾಗಿ ಕೊಡುತಲಿದ್ದಾನೆ. ಪಂಚಮಹಾಭೂತಗಳಲ್ಲಿ ಒಂದಾದ ಅಗ್ನಿತತ್ವವುಕೂಡ, ಲಂಚತಿನ್ನದೆ ನಮ್ಮ ಕೆಲಸವನ್ನು ಮಾಡಿಕೊಡಲಾರ ದೆಂಬುದನ್ನು, ಆ ಉರಿಯು ಸಾರಿಹೇಳುವಂತಿದ್ದಿತು. ಹುಲ್ಲು ತರಗೆಲೆ ಗಳನ್ನು ಹಾಕಿದಾಗಷ್ಟು, ಬಡವನ ಸಿಟ್ಟಿನಂತೆ ಭಗ್ಗನೆ ಹೊತ್ತಿ ಮೇಲ ಕ್ಕೇಳುವುದು; ಮತ್ತೆ ಮೊಲೆಹಾಲಿಲ್ಲದ ಎಳಮಗುವಿನಂತೆ ರಿಣಿರಿಣಿ ಯೆನ್ನುವುದು. ಲಕ್ಕಣ್ಣನಿಗಿಂತ ಎರಡುವರುಷಕ್ಕೆ ಕಿರಿಯವನು ಚಿಕ್ಕ. ಆತನು ತೊಟ್ಟುಕೊಂಡಿದ್ದ ಅಂಗಿ ಆತನದಲ್ಲ; ಅವನ ತಂದೆ ಯದು. ಬೆನ್ನಕಡೆಯ ಭಾಗವೆಲ್ಲ ಹರಿದುಹೋಗಿದ್ದಿತು. ಮುಂಬ ದಿಯು ಮೀನಿನ ಜಾಳಿಗೆಯಂತಾಗಿದ್ದಿತು. ಬಲಗೈಯ ತೋಳು ಕಂಕುಳವರೆಗೆ ಸೀಳಿ, ಚುಂಗುಚುಂಗಾಗಿ ನೆಲಕ್ಕೆ ಅಲೆದಾಡುತ್ತಿದ್ದಿತು. ತಲೆಯಮೇಲೆ ಯಾರೋ ಬಿಸಾಟಿಬಿಟ್ಟಿದ್ದ ಎಣ್ಣೆಕಿಂದ ಟೊಪ್ಪಿಗೆ. ಆತ, ಕೈಯಲ್ಲಿ ಚಿಕ್ಕ ಕಟ್ಟಿಗೆಯೊಂದನ್ನು ಹಿಡಿದುಕೊಂಡು, ಬೂದಿಯನ್ನು ಬದಿಗೊತ್ತಿ, ಹುಲ್ಲನ್ನು ಅತ್ತಿತ್ತಸರಿಸಿ, ಚೆನ್ನಾಗಿ ಉರಿಯಾಗುವುದಕ್ಕೆ ಸಹಾಯ ಮಾಡುತ್ತಿದ್ದನು. ಮೂರನೆಯವಳು ಹುಡುಗಿ. ನಮ

ವಿನ ಕೆಳಕ್ಕೆ, ಮೊಣಕಾಲಮೇಲಕ್ಕೆ ಸುತ್ತಿಕೊಂಡಿದ್ದ ಅರಿವೆಯು ತುಂಡನ್ನೇ ತನ್ನ ಸೀರೆಯೆಂದವಳು ಅಭಿಮಾನಪಡುತ್ತಲಿದ್ದಳು. ಇಂತಹ ಸೀರೆ ಸಿಕ್ಕಮೇಲೆ ಕುಪ್ಪಸವನ್ನು ಕಟ್ಟಿಕೊಂಡು ಅವಳೇನು ಮಾಡುವಳು. ಅದರ ಯೋಚನೆಯೇ ಹುಡುಗಿಗಿದ್ದಂತೆ ಕಾಣಲಿಲ್ಲ. ತಲೆಗೂದಲು ಚೆದರಿ ಚೆಲ್ಲಾಪಿಲ್ಲಿಯಾಗಿ ಮುಖವನ್ನು ಮುಚ್ಚಿಬಿಟ್ಟಿದ್ದಿತು. ನಾಲ್ಕನೆಯವನಿಗೆ ಐದುವರ್ಷದ ವಯಸ್ಸು; ತನ್ನ ತಂದೆಯು ಉಟ್ಟುಕೊಳ್ಳುವ ಪಂಚೆಯನ್ನು ಹೊತ್ತುಕೊಂಡು ಕುಳಿತಿದ್ದಾನೆ. ಉರಿ ಭಗ್ಗನೆ ಎದ್ದಾಗ ಕಾವು ತಗುಲಿ, ಅಲ್ಲಲ್ಲಿ ಮೈ ಚುರುಗುಟ್ಟುವುದು. ಆಗ ಎಲ್ಲರೂ " ಆಹಾ " ಎಂದು ಮೈಮೇಲೆ ಕೈಯಾಡಿಸಿಕೊಳ್ಳುವರು. ಉರಿಯು ಕಡಿಮೆಯಾಗುತ್ತಲೆ ಚಳಿಗೆ ಗಡಗುಟ್ಟಿ ನಡುಗುವರು. ಕಟಕಟನೆ ಹಲ್ಲುಗಳನ್ನು ಬಾರಿಸುವರು.

ಯಜಮಾನರ ಮನೆಯ ಕೆಲಸವನ್ನೆಲ್ಲ ಮುಗಿಸಿಕೊಂಡು ಮಾದಪ್ಪ ಗುಡಿಸಿಲಕಡೆಗೆ ಬಂದ. ಚಿಕ್ಕ, ಮೊದಲು ನೋಡಿದವನೇ " ಅಪ್ಪಬಂದ, ಅಪ್ಪಬಂದ " ಎಂದು ಕೈತಟ್ಟುತ್ತ ಕುಣಿದ. ಎಲ್ಲರೂ " ಹೋ ಅಪ್ಪಬಂದ " ಎಂದು ಕಿರುಚುತ್ತ ಕುಣಿಯಲು ತೊಡಗಿದರು. ಚಿಕ್ಕ ಮಗುವೂ ತನ್ನ ಪುಟ್ಟಕೈಗಳಿಂದ ಚಪ್ಪಳಿಯಿಕ್ಕುತ್ತ, ಎದೆಯಹಿಗ್ಗನ್ನು ಮುಖದಮೇಲೆ ಮೂಡಿಸಿಕೊಂಡು, ಕುಣಿದಾಡಿತು. ಅದೆಷ್ಟೋ ನವಿಲುಗಳು ತಮ್ಮ ಬಣ್ಣಬಣ್ಣದ ಗರಿಗಳನ್ನು ಕೆದರಿ ಕುಣಿಯುತಿರುವ ನೋಟಕ್ಕಿಂತ, ಈ ನೋಟವು ಮಾದಪ್ಪನಿಗೆ ಅಂದವಾಗಿ ತೋರಿರಬಹುದು. ಮಾದಪ್ಪನು ಅರಳಿದೆದೆಯಿಂದ, ನಗುಮೊಗದಿಂದ, ಅಲ್ಲಿಗೆ ಬಂದು ಕಿರಿಯ ಹುಡುಗನನ್ನು ಎತ್ತಿಕೊಂಡು ಮುತ್ತಿಟ್ಟನು. ಆತನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು, ಎಲ್ಲ ಮಕ್ಕಳನಡುವೆ ತಾನೂ ಕುಳಿತುಕೊಂಡು, ಚಳಿಕಾಯಿಸಿಕೊಳ್ಳಲು ತೊಡಗಿದನು. ಆನಂದ ಅಹಂಕಾರಗಳು ಬೆರೆತಭಾವದ ಆತನ ಕಣ್ನೋಟವು ಎಲ್ಲ ಮಕ್ಕಳನ್ನೂ ಒಂದೊಂದು ಸಲ ನೋಡುತ್ತಿದ್ದಿತು.

ಬಡವರಾದರೇನು, ಸಿರಿವಂತರಾದರೇನು ! ತಂದೆಯಲ್ಲಿಯ ಕರುಳು ತಂದೆಯದೇ ಇರುವುದು. ಮಮತೆಯ ಅತಿಶಯತೆಯನ್ನು ತೋರಿಸಬೇಕಾದಾಗ, ಬಡವರಿಗೂ ಸಿರಿವಂತರಿಗೂ ಸಾಧನವೆಂದರೆ ಒಂದೇ; ಮುತ್ತು. ಆಗಿನ ಇಬ್ಬರ ಮುತ್ತುಗಳಿಗೂ ಬೆಲೆಯು-ಇದ್ದರೆ -ಅಷ್ಟಷ್ಟೇ! ಆ ಮುತ್ತುಗಳ ಪ್ರತಿಫಲವಾದ ಆನಂದಾನುಭವದ ಆಳತೆಯೂ ಅಷ್ಟಷ್ಟೇ! ಸಿರಿವಂತರಿಗೆ- ಬಡವರಿಗೆ ಹುಟ್ಟುಸಾವುಗಳು, ಬಿಸಿಲು ನೆರಳುಗಳು, ಹೇಗೆ ಸಾಮಾನ್ಯವೋ ಇದೂ ಹಾಗೆಯೇ. ಒಲಿವಿನ ಮುತ್ತು, ಮುತ್ತಿಟ್ಟನಲಿವು ಇವೆರಡೂ ಆದೆಷ್ಟು ಜಡಸಂಪತ್ತಿಯನ್ನು ಕೊಟ್ಟರೂ ದೊರೆಯದಂತಹ ವಸ್ತುಗಳು. ಎಂತಹ ತಿರುಕನನ್ನೂ ಕೊಂಚವೇಳೆ ಸಾರ್ವಭೌಮನ ಹೆಮ್ಮೆಗೇರಿಸುವವು. ಮಕ್ಕಳ ಒಳಿಯಲ್ಲಿ ಕುಳಿತಿದ್ದ ಮಾದಪ್ಪ, ತನ್ನ ಯಾವುದೆಲ್ಲ ತಳಮಳ-ಕಳವಳಗಳನ್ನೂ ಆಗ ಮರೆತುಬಿಟ್ಟಿದ್ದ. ಅಪರೋಕ್ಷಾನುಭೂತಿಯನ್ನು ಪಡೆದ ಯೋಗಿಯಂತೆ ಆತನ ಮನಸ್ಸು ನಿರ್ಮಲವಾಗಿದ್ದಿತು. ಹಿಗ್ಗಿದೆದೆಯ ಯಾವುದೋ ಒಂದು ಭಾಗವು- ರಾಮನನ್ನು ಕಂಡಾಗ ಶಬರಿಯು ಅಂದಂತೆ " ನಾನಿಂದು ಧನ್ಯ " ಎಂದು ಮರಳಿ ಮರಳಿ ನುಡಿಯುತ್ತಿದ್ದಿತು.

ಚಿಕ್ಕನು ಮಾತನಾಡತೊಡಗಿದ. " ಏನಪ್ಪಾ ಇದು ಹಾಳು ಚಳಿ! ನೋಡು, ನಿನ್ನೆ ರಾತ್ರಿಯೆಲ್ಲಾ ನಮಗೆ ಯಾರಿಗೂ ನಿದ್ದೆಯೇ ಇಲ್ಲ ನೋಡು; ಬೆಳತನಕ ಗಡಗಡ ನಡುಗಿ ನಡುಗಿ ಸಾಕಾಯಿತು. ನನಗೆ ಈ ಅಂಗಿಯಾದರೂ ಇತ್ತು. ಲಕ್ಕಣ್ಣನಿಗೆ ಅಂಗಿ ಸಹ ಇಲ್ಲ. ಚಾಪೆಯಮೇಲೆ ಅಪ್ಪುಗೈಹಚ್ಚಿಕೊಂಡು, ಹಾಗೆಯೆ ನಡುಗುತ್ತ ಬಿದ್ದು ಬಿಟ್ಟಿದ್ದ. "

ಹುಡುಗಿ ಹೇಳಿದಳು. " ಹೌದು ನೋಡಪ್ಪ! ನಮಗೂ ಬಾಳ ಚಳಿ ಆಯಿತು. ಅವ್ವ ನನ್ನ, ಪುಟ್ಟನ್ನ ಮಗ್ಗುಲಲ್ಲಿ ಮಲಗಿಸಿಕೊಂಡು ಸೀರೆಯ ಸೆರಗು ಹೊಚ್ಚಿದಳು. ಆದರೂ ಬಾಳ ಚಳಿ ನೋಡು "

ಲಕ್ಕಣ್ಣ ಮಾತನಾಡಿದ " ಏನು ಹೋಗಪ್ಪಾ! ಅಂಗೀ ಹೊಲಿಸಿ ಕೊಡು– ಅಂದರೆ, ಹಾಂಗೇ ನಾಳೆ ನಾಳೆ– ಅಂತ ನಡೆದಿದ್ದೀ. ನೋಡು ಈ ಚಳಿ ! ಹೋಗಲಿ, ಅಂಗಿ ಇಲ್ಲದಿದ್ದರೆ ಇಲ್ಲ; ಹೊದ್ದುಕೊಳ್ಳಲಿಕ್ಕೆ ಒಂದು ಕಂಬಳಿಯನ್ನಾದರೂ ಕೊಂಡು ಕೊಡಪ್ಪಾ "

ಅದೊಂದು ಬಗೆಯ ಹೆಮ್ಮೆಯಿಂದ ಗಟ್ಟಿಗೊಂಡಿದ್ದ ಮಾದಪ್ಪನ ಹೃದಯವೀಗ ಕರಗಿ ನೀರಾಯಿತು. ಅನಂತವಾದ ಆನಂದಮಯ ಲೋಕದಲ್ಲಿ ಹಾರಾಡುತ್ತಿದ್ದ ಮಾದಪ್ಪನು, ಇದ್ದಕ್ಕಿದ್ದ ಹಾಗೆಯೆ ಆಳಲಿನ ಕಲ್ಲುಕಂಟಕದಿಂದ ಕೂಡಿದ ಕಾಡಿನಲ್ಲಿ ದೊಪ್ಪನೆ ಬಿದ್ದನು. ಉರಿಯ ಮುಂದೆ ಕುಳಿತಿದ್ದರೂ ಮಂದಾರತರುವಿನ ತಣ್ಪನ್ನು ಅನುಭವಿಸುತಲಿದ್ದ ಮಾದಪ್ಪನು, ಮುಂದೆ ಉರಿಯುತಲಿದ್ದ ಉರಿಯು– ಸೂರುಮುಡಿಯುಷ್ಟು ಉಷ್ಣತೆಯನ್ನು ತಳೆದು-ಹೃದಯದಲ್ಲಿ ಹೊಕ್ಕಂತೆ ತಳಮಳಿಸಿದನು. ಎಲ್ಲ ಮಕ್ಕಳ ಮುಖಗಳನ್ನೂ ಒಂದೊಂದು ಸಲ ನೋಡಿದನು. ಬಳಿಕ ಆಗಸದತ್ತ ನೋಡುತ್ತ, ನಿಟ್ಟುಸಿರೊಂದನ್ನು ಬಿಟ್ಟನು. ಜಡವಾದ ದನಿಯಲ್ಲಿ ಎಲ್ಲರನ್ನೂ ಉದ್ದೇಶಿಸಿ ಹೇಳಿದನು. "ನೋಡಿ, ಈತಿಂಗಳ ಸಂಬಳಬರಲಿ; ಮೊದಲು ಎಲ್ಲರಿಗೂ ಒಂದೊಂದು ಅಂಗಿಯನ್ನು ಹೊಲಿಸುತ್ತೇನೆ "

ಹುಡುಗಿ ಆತುರದಿಂದ ಹೇಳಿದಳು ": ನನಗೆ ದಟ್ಟಿ ಬೇಕು."

" ಆಗಲಮ್ಮಾ ನಿನಗೆ ದಟ್ಟಿಯನ್ನೂ ತರುತ್ತೇನೆ. "

ಚಿಕ್ಕನು ಹೇಳಿದ. " ಅಪ್ಪಾ ! ನಮ್ಮ ಶಾಲೆಯಲ್ಲಿ ವಕೀಲರ ರಂಗಪ್ಪ ಇಲ್ಲs? ಅವನ ಜರದಟೊಪ್ಪಿಗಿ ಎಂತಾ ಚೆನ್ನಾಗಿದೆ ಅಂತೀ; ಅಷ್ಟು ಚೆನ್ನಾಗಿದೆ ನೋಡು ! "

ಅಂತಹ ಚಳಿಯಲ್ಲಿಯೂ ಮಾದಪ್ಪನ ಬಾಯಿಂದ ಬಿಸಿಯಾದ ಉಸಿರೊಂದು ಹೊರಬಿದ್ದಿತು. ಬಳಿಕ ಮಾತನಾಡಿದ " ಅವರು ಹಣ ಇದ್ದವರು ಮಗು ! ಅವರಹಾಗೆ ನಮಗೆ ಎಲ್ಲಿಂದ ಬಂದೀತು. ನಾವು ಬಡವರು. "

ಮಕ್ಕಳೂ ತಗ್ಗಿದ ಮೊಗದವರಾಗಿ ಒಂದೊಂದು ಉಸಿರನ್ನು ಹಾಕಿದರು. ಯಾರೂ ಮಾತನಾಡದೆ ಉರಿಯನ್ನು ಕಾಯಿಸಿಕೊಳ್ಳ ತೊಡಗಿದರು.

ಬಾಳಿನಲ್ಲಿ ಅದೆಷ್ಟು ತೊಂದರೆ ತೊಡಕುಗಳಿದ್ದರೂ, ಇಲ್ಲದ ಆನಂದವನ್ನು ಕಲ್ಪಿಸಿಕೊಂಡು ಸುಖಪಡುವುದು ಮನುಷ್ಯ ಸ್ವಭಾವ. ಹೀಗಿಲ್ಲದಿದ್ದರೆ " ಮಾಯೆ " " ಲೀಲೆ " ಎಂದು ಹೇಳುತ್ತಿರುವ ವೇದಾಂತಿಗಳ ಮಾತಿಗೆ ಬೆಲೆಯೇ ಇರುತ್ತಿರಲಿಲ್ಲ. ಗುಡಿಸಿಲಿನಲ್ಲಿ ಮಾದಪ್ಪನ ಹೆಂಡತಿ– ಹೊನ್ನಮ್ಮ ಹಾಡಿ ಹಾಡಿ ಬೀಸುತ್ತಿದ್ದಳು.

" ಬಡತನ ನನಗಿರಲಿ, ಬಾಳ ಮಕ್ಕಳು ಇರಲಿ।
ಮ್ಯಾಗ ಗುರುವೀನ ದಯವಿರಲಿ॥
ಮ್ಯಾಗ ಗುರುವೀನ ದಯವಿರಲಿ ಮಾದೇವ।
ಬಡತನದ ಚಿಂತಿ ನಿನಗಿರಲಿ "॥

ಯೋಚನೆಯಲ್ಲಿ ಕುಳಿತ ಮಾದಪ್ಪನು, ಮನಸನ್ನಾರಿಸಿಕೊಳ್ಳಲು ಇಂಪಾಗಿ ಕೇಳುತಲಿದ್ದ ತನ್ನಾಕೆಯ ಹಾಡಿನಕಡೆಗೆ ಕಿವಿಗೊಟ್ಟನು. ಈ ಹಾಡನ್ನು ಕೇಳಿ, ಮುಖಮುದುಡಿಸಿ, ವಿಷಾದದ ಕಿರುನಗೆನಗುತ್ತ, ಮನಸ್ಸಿನಲ್ಲಿಯೆ ಎಂದುಕೊಂಡನು. " ಹಣವಂತರಿಗಾಗಿ ಹೊಸ ಹೊಸ ಸುಖದ ಸಾಧನಗಳನ್ನು ಹುಡುಕುತ್ತ ಹೊರಟ ಮಾದೇವನಿಗೆ, ಬಡವರಕಡೆಗೆ ನೋಡಲಿಕ್ಕೆ ಬಿಡುವೇ ಸಿಕ್ಕದಾಗಿದೆ. ಹಿಂದಿನ ಕಾಲದಲ್ಲಿ ಮಾದೇವ– ಬಡವರಕಡೆಗೆ ಮುಖ, ಹಣವಂತರಕಡೆಗೆ ಬೆನ್ನು ಮಾಡಿ ಕುಳಿತಿದ್ದನಂತೆ; ಕಲಿಕಾಲ ! ಎಲ್ಲವೂ ತಿರುವುಮುರುವು! ಈಗ ಆತನು ಬಡವರಕಡೆಗೆ ಬೆನ್ನು ತಿರುಗಿಸಿ, ಸಿರಿವಂತರಕಡೆಗೆ ಮುಖಹೊರಳಿಸಿ ಕುಳಿತಿದ್ದಾನೆ..........."

ಹೊನ್ನಮ್ಮ, ಮತ್ತೊಂದು ಹಾಡನ್ನು ಹೇಳಲು ತೊಡಗಿದಳು.

" ಸರದಾರ ! ನಿನ್ನಿಂದ ಸರುವೆಲ್ಲ ಮರೆತೇನು ।
ಸರದಾಗ ಇರುವ ಗುಳದಾಳಿ ॥
ಸರದಾಗ ಇರುವ ಗುಳದಾಳಿ ನಿನ್ನಿಂದ ।
ಇರುವ ಬಡತಾನ ಮರೆತೇನು "॥

ಈ ಹಾಡನ್ನು ಕೇಳಿ ಮಾದಪ್ಪನ ಕಳವಳಗೊಂಡ ಹೃದಯವು ಹಿಗ್ಗಿತು. ಮನಸ್ಸು ಈ ಲೋಕದಿಂದ ಇನ್ನಾವುದೋ ಲೋಕಕ್ಕೆ ಹಾರುತ್ತ ಹಾರುತ್ತ ಹೋಯಿತು. ಮೊಗದಲ್ಲಿದ್ದ ವಿಷಾದದ ಕಿರು ನಗೆಯು ಹಸಾದದ ನಗೆಮುಗುಳಾಯಿತು. ಸಾರ್ವಭೌಮನನ್ನು ಸರಿಗಟ್ಟುವಂತಹ ಅದೊಂದು ಬಗೆಯ ಹೆಮ್ಮೆಯು ಅಂಗಾಂಗ ದಲ್ಲಿಯೂ ಹರಿದಾಡಿತು. ತೊಡೆಯಲ್ಲಿದ್ದ ಮಗುವನ್ನು ಅಲ್ಲಿಯೆ ಕೆಳಕ್ಕೆ ಕೂರಿಸಿ, ಚೆಟ್ಟನೆ ಎದ್ದು ಗುಡಿಸಿಲಕಡೆಗೆ ನಡೆದನು. ತನಗೆ ತಂದೆ ಮುತ್ತಿಟ್ಟುದಕ್ಕೂ, ಎತ್ತಿಕೊಂಡುದಕ್ಕೂ ಆ ಮಗುವಿಗಾದ ಆನಂದವು ಅಮಿತವಾದುದು. ಮೂಲೋಕದ ಒಡೆತನ ಬಂದಾಗ ಆಗುವ ಆನಂದದ ಜೊತೆಗೆ ಸಮಾನವಾಗಿ ನಿಲ್ಲತಕ್ಕಂತಹದು.

ಮಾದಪ್ಪ ಗುಡಿಸಿಲ ಬಾಗಿಲಲ್ಲಿ ನಿಂತುಕೊಂಡು, ನಗುತ್ತಿರುವ ಕಣ್ಣುಗಳಿಂದ ಹೆಂಡತಿಯನ್ನು ನೋಡಿಯೆ ನೋಡಿದನು. ಆಕೆ ಬೀಸು ವುದರಲ್ಲಿ ನೈಮರೆತು ಹೋಗಿದ್ದಳು. ತನಗಿಲ್ಲದ ಭೌತಿಕಭಾಗ್ಯ ಗಳನ್ನು ಹಾಡಿನಲ್ಲಿ ತಂದುಕೊಂಡು, ಕೊರತೆಯನ್ನು ಮರೆಯುತ್ತಿ ದ್ದಳು. ಬದುಕಿನಲ್ಲಿಯ ಒಲವಿನ ಅನುಭವದ ಚಿತ್ರಗಳನ್ನು, ಹಾಡಿನ ಮಾತುಗಳಲ್ಲಿ ಮೂಡಿಸಿ ನೋಡಿ ನೋಡಿ ತನ್ಮಯಳಾಗುತ್ತಿದ್ದಳು.

> " ದಡಿಯ ದೋತರದವರು ಮಡಿಯ ಉಂಗುರದವರು ।
> ನಡಗನ್ಸರದವರು ನನ್ನ ನೀರ ! ॥
> ನಡಗನ್ಸರದವರು ನನ್ನ ನೀರ ನಿಮ್ಮಿಂದ ।
> ಗಡಿನಾಡ ತವರ ಮರೆತೇನು " ॥

ಈ ಹಾಡನ್ನು ತನ್ನಾಕೆ ಹಾಡುವಾಗ, ಮಾದಪ್ಪನಿಗೆ ತನ್ನ ಹರಯತನದ ಬದುಕು ಕಣ್ಣೆದುರಿಗೆ ಬಂದುನಿಂತಿತು. ಹೊಸ ಮೊದಲ ಗಿತ್ತಿಯಾಗಿ ಒಂದು ನಾಚಿಕೆಯ ಓರೆಗಣ್ಣಿನಿಂದ ನೋಡುತ್ತ, ಒಯ್ಯಾ ರದ ಬಿಗುಹಿನಿಂದ ಅರೆಮಾತನಾಡುತ್ತ ಮುಗುಳು ನಗೆಯನ್ನು ಮುಂಜೆ ರಗಿನಲ್ಲಿ ಮರೆಮಾಡುತ್ತ, ಇದ್ದ ಹೊನ್ನಮ್ಮನ ಮೂರ್ತಿಯು ಮುಂದೆ

ಬಂದುಹೋಯಿತು. ಮೈಯಲ್ಲಿ ಮಿಂಚು ಮಿಂಚಿದಂತಾಯಿತು. ಮೈಗೂದಲು ಮೇಲಕ್ಕೆದ್ದಿತು. ಸರ್‍ರನೆ ಹೋಗಿ ತನ್ನಾಕೆಯ ಗಲ್ಲಗಳೆರಡನ್ನೂ, ಮಾದಪ್ಪ ತನ್ನ ಕೈಯಿಂದ ಅದುಮಿ ಹಿಡಿದು, ಅತ್ತಿತ್ತ ಅಲ್ಲಾಡಿಸತೊಡಗಿದನು. ಹೊನ್ನಮ್ಮನ ಬೀಸುವುದು ತಟ್ಟನೆ ನಿಂತು ಬಿಟ್ಟಿತು. ಬೆಚ್ಚಿಬಿದ್ದು ಮುಖವೆತ್ತಿ ನೋಡಿದಳು. ಎದೆಯ ಹಿಗ್ಗನ್ನೇ ಮುಗುಳುನಗೆಯ ಮುಖಾಂತರ ಹೊರಕ್ಕೆ ಸೂಸುತ್ತಲಿದ್ದ ಮಾದಪ್ಪ. ಹೊನ್ನಮ್ಮನು ಕಣ್ಣರಳಿಸಿ ಗಂಡನನ್ನು ನೋಡಿಯೆ ನೋಡಿದಳು. ಅದೆಂತಹ ನೋಟವದು ! " ಜಗತ್ತಿನಲ್ಲಿ ನನ್ನದೆಂಬ ಅಭಿಮಾನಕ್ಕೆ ಪಾತ್ರವಾದ ವಸ್ತುವೆಂದರೆ ನೀನೊಬ್ಬನೇ ! " ಎಂಬ ಭಾವವನ್ನು ಆ ನೋಟದಲ್ಲಿ ಕಡೆದುತೆಗೆದಂತೆ ಕಾಣುತಿದ್ದಿತು.

## ೨

ಪುರುಷೋತ್ತಮ ನಾಯಕರ ಮನೆ, ಬೆಳಗಾಂವಿಯ ಅನಂತಶಯನ ಬೀದಿಯಲ್ಲಿ; ತಂದೆ ಸಂಪಾದಿಸಿಟ್ಟ ಸಂಪತ್ತು ನಾಯಕರಿಗೆ ಬೇಕಾದಷ್ಟಿದೆ. ಅಕ್ಕಪಕ್ಕದ ಹಳ್ಳಿಗಳಲ್ಲಿಯ ಅನೇಕ ಜನ ಒಕ್ಕಲಿಗರು ಬೆಳೆದ ಬೆಳೆಯೆಲ್ಲ, ಬಡ್ಡಿಯಾಗಿ ವರುಷವರುಷವೂ ಇವರ ಮನೆಯಲ್ಲಿ ಬಂದುಬೀಳುತಿದ್ದಿತು. ಉತ್ತು, ಬಿತ್ತಿ, ಒಕ್ಕಿ, ರಾಶಿಮಾಡುವುದಷ್ಟು ಆ ಒಕ್ಕಲಿಗರ ಕೆಲಸ; ಅದನ್ನು ಉಪಭೋಗಿಸುವ ಅಧಿಕಾರವೆಲ್ಲ ನಾಯಕರದು. ಆಳಾಗಿ ದುಡಿಯುವವನೊಬ್ಬ, ಅರಸನಾಗಿ ಉಣ್ಣುವವನೊಬ್ಬ. ಒಬ್ಬನ ಕೈ ಕೆಸರಾದರೆ, ಇನ್ನೊಬ್ಬನ ಬಾಯಲ್ಲಿ ಮೊಸರು. ದುಡ್ಡು ಎಂತೆಂತಹ ತಿರುವುಮುರುವನ್ನೂ ಸುಲಭವಾಗಿ ಮಾಡಬಲ್ಲುದು. ಮನೆಯಲ್ಲಿ ನಾಯಕರು, ಅವರ ಹೆಂಡತಿ ಇಬ್ಬರೇ. ದೂರದ ಬಳಗದಲ್ಲಿಯ ವಿದ್ಯಾರ್ಥಿಯೊಬ್ಬನು ಊಟಮಾಡಿಕೊಂಡು ಇವರ ಮನೆಯಲ್ಲಿರುತ್ತಿದ್ದ. ಈತನೊಬ್ಬನನ್ನು ಹಿಡಿದು ಎಣಿಸಿದರೆ ಮೂರುಜನರು.

ಮಾದಪ್ಪ ಈ ನಾಯಕರ ಮನೆಯಲ್ಲಿಯೆ ಊಳಿಗದಾಳಾಗಿ ಇರುವನು. ತನ್ನ ಹದಿನೈದನೆಯ ವರ್ಷದ ವಯಸ್ಸಿನಿಂದಲೂ ನಾಯಕರ ಮನೆಯಲ್ಲಿ ಕೆಲಸಕ್ಕಿದ್ದವನು, ಈಗ ಐವತ್ತು ವರ್ಷದವನಾದರೂ ಅಲ್ಲಿಯೆ ಇರುವನು. ಮಾದಪ್ಪನ ಸಂಬುಗೆಯ ನಡತೆಯನ್ನು ಜನರೆಲ್ಲರೂ ಹೊಗಳುತಿರುವರು. ನಾಯಕರಿಗೂ ಇದು ಗೊತ್ತಿಲ್ಲದೆ ಇರಲಿಲ್ಲ;ಆದರೇನು! ಈ ಸಂಬುಗೆಯ ನಡತೆಗೂ,ಮೈಮುರಿ ದುಡಿತಕ್ಕೂ, ಪ್ರತಿತಿಂಗಳಿಗೆ ಸಲ್ಲುತ್ತಿದ್ದ ಬೆಲೆಯೆಂದರೆ, ಒರೀ ಒಂಬತ್ತು ರೂಪಾಯಿ; ವರುಷದಲ್ಲಿ ಒಂದೆರಡು, ತೊಟ್ಟು ಬಿಡುಡಿದ ಒಟ್ಟೆಗಳು. ಬೇರೆ ಕಡೆಗೆ ಹೋದರೆ; ತನಗೆ ಇದಕ್ಕೂ ಹೆಚ್ಚಾಗಿ ಸಿಕ್ಕುವುದೆಂದು ಮಾದಪ್ಪನಿಗೇನು ಗೊತ್ತಿರಲಿಲ್ಲವೆಂತಲ್ಲ; ಆದರೆ ಮೂವತ್ತುವರುಷದ ಸಂಬಂಧ; ಬಿಟ್ಟು ಹೋಗುವುದಕ್ಕೆ ಮನಸ್ಸು ಹಿಂಜರಿಯುವುದು. ಮಾದಪ್ಪನ ಮನಸ್ಸೇನೋ ಹೀಗೆ; ನಾಯಕರದು ಈತನ ವಿಚಾರದಲ್ಲಿ ಹೇಗಿರಬಹುದು! "ಸರಿ! ಈತ ಬಿಟ್ಟುಹೋದರೆ,ಇವರಪ್ಪನಂತವರು ಐವತ್ತು ಜನರು ಬರುತ್ತಾರೆ. ದುಡ್ಡಿದ್ದರೆ ಯಾವುದಕ್ಕೆ ಕೊರತೆ!" ಎಂಬ ಉಪೇಕ್ಷಾ ಭಾವವೇ ಇರಬಹುದಲ್ಲವೇ ?

ಮುಂಬಗಲು; ಹತ್ತುಗಂಟೆಯ ಸಮಯವಿರಬಹುದು. ನಾಯಕರು ಮೊಗಸಾಲೆಯಲ್ಲಿ ಆರಾಮುಕುರ್ಚಿಯೊಂದರಮೇಲೆ ಬಿದ್ದುಕೊಂಡಿದ್ದಾರೆ. ಕೈಯಲ್ಲಿ ಯಾವುದೋ–ಹಿಂದಿನ ತಾರೀಖಿನ ವರ್ತಮಾನಪತ್ರವಿದೆ. ಬರೀ ಪ್ರಕಟನೆಗಳಿಂದ ತುಂಬಿದ ಪುಟವೊಂದನ್ನು ತೆರೆದು ಹಿಡಿದುಕೊಂಡಿದ್ದಾರೆ. ಗಹನ ವಿಚಾರವನ್ನು ಓದುವಾಗಿನ ಗಾಂಭೀರ್ಯವು ಮುಖದಮೇಲೆ ಮೂಡಿಬಿಟ್ಟಿದೆ. ಬಾಡಿ, ಬತ್ತಿ, ಜೋಲುಬಿದ್ದ ಮೊಗದವನಾಗಿ ಮಾದಪ್ಪ ಅಲ್ಲಿಗೆ ಬಂದ. ನಮ್ರತೆಯೇ ಮೂರ್ತಿವೆತ್ತು ನಿಂತಂತೆ, ನಾಯಕರ ಎದುರು ನಿಂತುಕೊಂಡ. ಮಾದಪ್ಪನ ಎದೆ, ಮನಸ್ಸು ಎಡೆಬಿಡದೆ ಮಾತನಾಡುತ್ತಿದ್ದುವು. ಆದರೆ ನಾಲಗೆಯು ಅವುಗಳ ಸಂದೇಶವನ್ನು ಹೊರಕ್ಕೆ ಹಾಕಲು ಹಿಂದೆ

ಮುಂದೆ ನೋಡುತ್ತಿದ್ದಿತು. ನಾಲಗೆಯ ಈ ಕೆಲಸಗೇಡಿತನಕ್ಕಾ
ಗಿಯೋ ಏನೋ! ಆತನು ಆಗಾಗ ಮುಖ ಮುದುಡಿಸುವನು. ಅಂಗೈ
ಗಳನ್ನು ಒಂದಕ್ಕೊಂದು ತಿಕ್ಕುವನು. ಕೊನೆಗೆ ನಾಲಗೆಯು ತನ್ನ
ಕಾರ್ಯಕ್ಕೆ ಸಿದ್ಧವಾಯಿತು; ತುಟಿಗಳು ಅದಕ್ಕೆ ತಡೆಯನ್ನುಂಟು
ಮಾಡಿದುವು. ನಾಯಕರಿಗೆ ತಮ್ಮ ವಾಚನದ ತನ್ಮಯತೆಯಲ್ಲಿ ಇದಾ
ವುದೂ ಗೊತ್ತಾಗಿರಲಿಕ್ಕಿಲ್ಲ. ತುಟಿಗಳ ಕಿಡಿಗೇಡಿತನದಿಂದ ಮಾದಪ್ಪ
ನಿಗೆ ಕೋಪಬಂಬಿತೇನೋ ! ಆದರೆ ಮಾಡುವನೇನು! ತನ್ನವೇ ತುಟಿ!
ಬಲವಂತದಿಂದ ಅವುಗಳ ತಡೆಯನ್ನು ಬಿಡಿಸಿದನು. ನಾಲಗೆ ಮುಂದ್ರ
ಷಡ್ಜದಲ್ಲಿ ಒಂದೇ ಶಬ್ದವನ್ನು ನುಡಿಯಿತು. " ರಾ– ಯ–ರೇ "

ನಾಯಕರು ಲಕ್ಷ್ಯವಿಲ್ಲದವರಂತೆ ತಮ್ಮ ವಾಚನವ್ಯವಸಾಯ
ವನ್ನು ಹಾಗೆಯೆ ಸಾಗಿಸಿದ್ದರು.

ದೈನ್ಯವು ತುಂಬಿದ ಜಡವಾದ ದನಿಯಲ್ಲಿ ಮಾದಪ್ಪ ಮತ್ತೆ
ಕೂಗಿದ " ರಾ– ಯ– ರೇ "

ಹುಬ್ಬುಗಂಟಿನ ಮೊಗವನ್ನು ಮೇಲಕ್ಕೆತ್ತಿ ನಾಯಕರು
ಗಂಭೀರಭಾವದಿಂದ ಕೇಳಿದರು.

" ಏನೋ ಮಾದಪ್ಪಾ ! "

ಅಂಗೈತಿಕ್ಕುತ್ತ, ಅರೆಸತ್ತವನಂತಾಗಿ, ತಗ್ಗಿದ ಮೊಗದಿಂದ
ಮಾದಪ್ಪ ಮಾತನಾಡಿದ. 'ತಮ್ಮಲ್ಲಿ ....ನನ್ನದೊಂದು....ಮಾತು....'

"ಏನು ಮಾತು ? ಸಂಬಳದ ವಿಷಯವಾಗಿ ಅಹುದಲ್ಲೋ !"

" ಹೌದು ರಾಯರೇ ! ಮನೆಯಲ್ಲಿ ನಾಲ್ಕುಮಕ್ಕಳು,
ನಾನು, ಹೆಂಡತಿ, ಆರುಜನರು. ನನಗೆ ಬರುವ ಒಂಬತ್ತುರೂಪಾಯಿ
ಸಾಲುವುದಿಲ್ಲ. "

" ಸಾಲದಿದ್ದರೆ ನಾವೇನು ಮಾಡಬೇಕೆನ್ನುತ್ತೀ ? ಇದ್ದುದ
ರಲ್ಲಿಯೆ ಸಾಗಿಸಿಕೊಂಡು ಹೋಗಬೇಕು. ನಿನ್ನ ಹೆಂಡತಿ ಕೆಲಸಕ್ಕೆ
ಹೋಗುವುದಿಲ್ಲವೇ ? ಅವಳಿಗೇನೂ ಸಿಕ್ಕುವುದಿಲ್ಲವೇ ?

" ಮನೆಯಲ್ಲಿ ಜನ ಹೆಚ್ಚು ರಾಯರೇ ! ನೀರುನಿಡಿ, ಅಡಿಗೆ ಅಂಬಲಿ, ಇವರಲ್ಲಿಯೇ ಹೊತ್ತು ಹೋಗಿಬಿಡುತ್ತದೆ. ಆಕೆಗೆ ಬಿಡುವೇ ಸಿಕ್ಕುವುದಿಲ್ಲ. "

" ನಿನ್ನ ಮಕ್ಕಳನ್ನೂ ಎಲ್ಲಿಯಾದರೂ ಕೆಲಸಕ್ಕೆ ಇಡಬೇಕು !"

" ಮ್ಯುನಸಿಪಾಲಿಟಿಯವರು ಒಬ್ಬ ಮಗನನ್ನಾದರೂ ಸಾಲೆಗೆ ಕಳಿಸಲಿಕ್ಕೇ ಬೇಕೆಂದು ಬಲವಂತ ಪಡಿಸಿದರು; ಎರಡನೆಯ ಹುಡುಗ ಸಾಲೆಗೆ ಹೋಗುತ್ತಾನೆ. ಹಿರಿಯವನು ಅತ್ತಿತ್ತ ಕೆಲಸಕ್ಕೆ ಹೋಗು ತ್ತಿರುತ್ತಾನೆ. ಸಣ್ಣ ಹುಡುಗ, ಹೆಚ್ಚಿಗೆ ಕೂಲಿಸಿಕ್ಕುವುದಿಲ್ಲ; ತಿಂಗಳಿಗೆ ಎರಡು ಮೂರು ರೂಪಾಯಿಯೆಂದರೆ ಹೆಚ್ಚು. ಇಷ್ಟರಿಂದ ಏನಾಗ ಬೇಕು ರಾಯರೇ ! "

ಬೇಸರದ ದನಿಯಲ್ಲಿ ರಾಯರು ಕೇಳಿದರು.

" ಹಾಗಾದರೆ ಈಗೇನು ಮಾಡಬೇಕೆನ್ನುತ್ತೀ ? "

ಹೊರಬೀಳಬೇಕೆನ್ನುತ್ತಿರುವ ಕಂಬನಿಗಳನ್ನು ಬಲವಂತದಿಂದ ತಡೆಹಿಡಿಯುತ್ತ, ಬಿಗಿದುಬರುತ್ತಿರುವ ಕೊರಳನ್ನು ಹುಸಿಕೆಮ್ಮಿನಿಂದ ಸಡಿಲುಮಾಡಿಕೊಳ್ಳುತ್ತ, ಮಾದಪ್ಪನು ಮಾತನಾಡಿದ.

" ನೋಡಿ, ಮನೆಯಲ್ಲಿ ಮಕ್ಕಳ ಮೈಮೇಲೆ ಒಂದಕ್ಕೂ ಅಂಗಿಯಿಲ್ಲ. ಚಾಪೆಯಹೊರತು ಹಾಸಿಗೆಯಿಲ್ಲ. ಹೊದ್ದುಕೊಳ್ಳ ಲಿಕ್ಕಂತೂ ಏನೂ ಇಲ್ಲ; ಚಳಿಗಾಲ, ಮಕ್ಕಳೆಲ್ಲ ರಾತ್ರಿಯೆಲ್ಲವೂ ಚಳಿ ಯಿಂದ ನಡುಗಿ ನಡುಗಿ ಸೆಡೆದುಹೋಗುತ್ತವೆ. ಹೆಂಡತಿಗೆ ಒಂದೇ ಒಂದು ಸೀರೆ; ಅದೂ ಹರಿಯುವ ಹಾದಿಯನ್ನು ಹಿಡಿದಿದೆ........"

ಮಾದಪ್ಪನ ಮಾತು ಅಷ್ಟಕ್ಕೆ ನಿಂತಿತು. ಆತನ ಬಲವಂತದ ತಡೆಯನ್ನೂ ಲೆಕ್ಕಿಸದೆ, ಕಂಬನಿ ಗಲ್ಲದಮೇಲೆ ಹರಿದುಬಂದಿತು. ನಾಯ ಕರು ಯಾವುದನ್ನೂ ಮನಸ್ಸಿಗೆ ಮುಟ್ಟಿಸಿಕೊಳ್ಳದೆ, ತಮ್ಮ ಸ್ವಾಭಾ ವಿಕ ಗಾಂಭೀರ್ಯದಲ್ಲಿಯೆ ಮಾತನಾಡಿದರು.

" ಸರಿ ! ಇದೆಲ್ಲವೂ ಪುರಾಣವಾಯಿತು ! ನಿನ್ನ ಸಂಸಾರವೆಲ್ಲವನ್ನೂ ಸಾಗಿಸುವ ಹೊಣೆಯನ್ನೇನೂ ನಾವು ಹೊತ್ತಿಲ್ಲವಲ್ಲ !

" ಅಹುದು ರಾಯರೇ ! ಬಹುದಿನದಿಂದಲೂ ತಮ್ಮಲ್ಲಿಯೆ ದುಡಿಯುತ್ತಿದ್ದೇನೆ. ಏನಾದರೂ....ಒಂದೆರಡು ರೂಪಾಯಿ....ಸಂಬಳ ಹೆಚ್ಚು ಮಾಡಿದರೆ............ "

" ಸರಿ ! ಒಂದೇ ಮಾತನ್ನು ನಿನಗೆ ಎಷ್ಟು ಸಲ ಹೇಳಬೇಕು ? ವಿಚಾರಮಾಡೋಣ—ಎಂದು ಆವೊತ್ತೇ ಹೇಳಿಲ್ಲವೇ ? ಇರಲಿ, ಈಗ ನೀನು ಹೋಗು ನನಗೆ ಕೆಲಸವಿದೆ. "

ರಾಯರ ಕಣ್ಣುಗಳು ಮತ್ತೆ ವರ್ತಮಾನಪತ್ರದ ಪ್ರಕಟನೆಯ ಕಡೆಗೆ ಹೊರಳಿದುವು. ಮಾದಪ್ಪ ಎರಡು ಮೂರು ನಿಮಿಷ ಅಲ್ಲಿಯೆ ಸುಮ್ಮನೆ ನಿಂತುಬಿಟ್ಟಿದ್ದ; ಬಳಿಕ ಹೊರಟು ನಡೆದ. ಹೋಗುವಾಗ ನಾಯಕರು ಅಧಿಕಾರದ ದರ್ಪದ ದನಿಯಲ್ಲಿ ಹೇಳಿದರು.

" ಮಾದಪ್ಪಾ ಊಟಮಾಡಿ ಬೇಗನೆ ಬಾ. ಇಲ್ಲಿ ತುಂಬ ಕೆಲಸಗಳಿವೆ. "

೩

ಮಧ್ಯಾಹ್ನದ ಊಟಕ್ಕೆಂದು ಮಾದಪ್ಪ ಮನೆಗೆ ಬಂದ. ದುಡಿತಕ್ಕೇನೂ ಕಡಿಮೆಯಿಲ್ಲ. ಬೆಳಗಿನಲ್ಲಿ ಏನೂ ತಿಂದಿರಲಿಲ್ಲ. ಹೊಟ್ಟೆ ತುಂಬ ಹಸಿವು ಆತನಿಗೆ. ವಿರಹಿಣಿಯಾದ ಗರತಿ, ಇನಿಯನ ದಾರಿಯನ್ನು ನಿರುಕಿಸುತ್ತಿದ್ದಂತೆ, ಆತನ ಕರುಳು ಅನ್ನಕ್ಕಾಗಿ ಕಾತರಗೊಂಡಿದ್ದಿತು. ಮನೆಗೆ ಬಂದವನೇ ತಲೆಯಮೇಲಿನ ರುಮಾಲನ್ನು ಗುಡಿಸಿಲ ಕಟ್ಟಿಗೆಗೊಂದಕ್ಕೆ ಸಿಲುಕಿಸಿ, " ಉಸ್ ಅಪ್ಪಾ " ಎಂದು ಗುಡಿಸಿಲಗೋಡೆಗೆ ಆತು, ತಲೆಯಮೇಲೆ ಎರಡೂ ಕೈಗಳನ್ನಿಟ್ಟುಕೊಂಡು, ತುದಿಗಾಲಮೇಲೆ ಭಾರಹಾಕಿ ಕುಳಿತುಕೊಂಡ. ಗಂಡನ ಬರುವನ್ನು ಕಂಡ ಹೊನ್ನಮ್ಮ, ಕೈಕಾಲು ತೊಳೆದುಕೊಳ್ಳಲು ನೀರನ್ನು ತಂದಿಟ್ಟಳು.

ಮಾನವಸ್ವಭಾವದೊಂದು ತಮಾಷೆ. ತಾನು ಹೆರವರಿಗೆ ಆಳಾಗಿ ಎಂತೆಂತಹ ಶ್ರಮದ ಕೆಲಸಗಳನ್ನು ಮಾಡುತ್ತಿದ್ದರೂ, ಮನೆಯಲ್ಲಿ ಹೆಂಡತಿ ತನ್ನ ಸೇವೆಮಾಡುವಾಗ, ಮನುಷ್ಯ ಕೊಂಚವೇಳೆ ತನ್ನ ಆಳ್ತನ ಕೀಳ್ತನಗಳನ್ನು ಮರೆತುಬಿಡುವನು; ಒಡೆತನದ ಗರುವಿಕೆಯಲ್ಲಿ ಓಲಾಡುತಿರುವನು. ಇಂತಹ ಗರುವಿಕೆಯಲ್ಲಿಯೆ ಮಾದಪ್ಪ ಮನದ ದುಗುಡವನ್ನು ಕ್ಷಣಕಾಲ ಮರೆತ. ಎದ್ದು ಹೊರಕ್ಕೆಹೋಗಿ, ಕೈಕಾಲು ತೊಳೆದುಕೊಂಡು ಒಂದು ಎಡೆಯಮೇಲೆ ಕುಳಿತ.

ಹೆಂಡತಿ, ಬಾಡಿದ ಮುಖದಲ್ಲಿ ಕಿರುನಗೆಯನ್ನು ಎಳೆದು ತಂದುಕೊಂಡು ಮಾತನಾಡತೊಡಗಿದಳು. " ಇಂದು ಜೋಳ ಸಾಕಷ್ಟು ಇರಲಿಲ್ಲ. ಇದ್ದಷ್ಟನ್ನೇ ಬೀಸಿ ರೊಟ್ಟಿಮಾಡಿದೆ. ಎಲ್ಲರೂ ಹರಿದು ಹಂಚಿಕೊಂಡು ತಿನ್ನಬೇಕಾಗಿದೆ. ಈಗ ತಾಸಿನ ಮೊದಲೆ, ಮಕ್ಕಳೆಲ್ಲರಿಗೂ ಒಂದೊಂದು ರೊಟ್ಟಿಯನ್ನು ಕೊಟ್ಟೆ. ಹಸಿದಮಕ್ಕಳು ಅಷ್ಟಷ್ಟೇ ತಿಂದು, ನೀರುಕುಡಿದು ಹೋದುವು. ಇಳಿಹೊತ್ತಿನಲ್ಲಿ ಕೊಡಬೇಕೆಂದು ತಲೆಗೆ ಅರ್ಧ ಅರ್ಧ ರೊಟ್ಟಿಯಂತೆ ತೆಗೆದಿಟ್ಟಿದ್ದೇನೆ. ಲಕ್ಕಣ್ಣ, ವಕೀಲರಾಯರ ಮನೆಯ ಹಸುವನ್ನು ಹೊಡೆದುಕೊಂಡು ಕಾಡಿಗೆ ಹೋದ. ಆತನಿಗೆ ಒಂದು ರೊಟ್ಟಿಯನ್ನು ಕಟ್ಟಿಕೊಟ್ಟೆ...." ಎಂದು ಮಾತನಾಡುತ್ತ, ಎರಡು ಚಿಕ್ಕ ಚಿಕ್ಕ ರೊಟ್ಟಿಗಳನ್ನು—ಮೇಲೆ ಕೊಂಚ ಅರೆದ ಕಾರವನ್ನಿಟ್ಟು—ಎಡೆಯಲ್ಲಿ ನೀಡಿದಳು. ಅಂತಹ ಹತ್ತು ರೊಟ್ಟಿಗಳನ್ನು ತಿಂದರೂ ಹಿಂಗದಷ್ಟು ಮಾದಪ್ಪನಿಗೆ ಹಸಿವು. ಹೆಂಡತಿಯ ಒಂದೊಂದು ಮಾತುಗಳೂ ಅಂಬಿನ ಮೊನೆಯಂತೆ, ಆತನ ಹಸಿದ ಕರುಳನ್ನು ಚುಚ್ಚಿದುವು. ಇಂತಹ ಅನುಭವವು ಮಾದಪ್ಪನ ಸಂಸಾರದಲ್ಲಿ ಅದೆಷ್ಟೋ ಸಲ; ಈಪೊತ್ತಿನದೇ ಮೊದಲನೆಯದೇನೂ ಅಲ್ಲ. ಆದರೆ ಇಂದು ಆತನು ತೀರ ಹಣ್ಣುಹಣ್ಣಾಗಿದ್ದನು. ಕಣ್ಣಕುಣಿಕೆಗಳಲ್ಲಿ ಕಂಬನಿಗಳು ಕಾಣಿಸಿದುವು. ಮಾದಪ್ಪ ಅಲ್ಲಿಯೆ ಅವುಗಳನ್ನು ಬೆರಳಿನಿಂದ ಮಿಡಿದ. ಕಳವಳದ ದನಿಯಲ್ಲಿ ಮಾತನಾಡಿದ.

"ತಿನ್ನಲಿಕ್ಕೆ ಏನು ಮಾಡೋಣ ?.... ಎಂದು ನಮಗೆ ಚಿಂತೆ; ತಿಂದುದನ್ನು ಹೇಗೆ ಅರಗಿಸೋಣ ?.... ಎಂದು ಹಣವಂತರಿಗೆ ಚಿಂತೆ. ತಿನ್ನುವ ಅನ್ನದ ಇಮ್ಮಡಿ ಬೆಲೆಯನ್ನು, ಅರಗಿಸುವ ಔಷಧಿಗಾಗಿ ವೆಚ್ಚ ಮಾಡುವರವರು. ನಮ್ಮ ರಾಯರು, ಒಂದು ದಿನದ ಫಲಾಹಾರಕ್ಕೆ ವೆಚ್ಚ ಮಾಡುವಷ್ಟು ಹಣವನ್ನು ನನಗೆ ತಿಂಗಳ ಸಂಬಳವಾಗಿಕೊಟ್ಟರೆ, ನಾವೆಲ್ಲರೂ ಸುಖವಾಗಿ ಬದುಕಿಕೊಂಡಿರಬಹುದು."

ಮರುಕದ ಮೆಲುನುಡಿಯಲ್ಲಿ ಹೊನ್ನಮ್ಮ ಕೇಳಿದಳು. "ಸಂಬಳ ಹೆಚ್ಚಿಸುವುದರ ಸಲುವಾಗಿ ಯಜಮಾನರನ್ನು ಕೇಳಿದಿರೇನು ?"

ನಿರಾಶೆಯ ದನಿಯಲ್ಲಿ ಮಾದಪ್ಪನ ಮರುನುಡಿ. "ಕೇಳಿದೆನು"

"ಏನೆಂದರು ?"

"ಅನ್ನುವುದೇನು? ಎಂದಿನಂತೆಯೆ ಇಂದೂ ಹೇಳಿದರು–ವಿಚಾರ ಮಾಡೋಣ, ಎಂದು." ಮಾದಪ್ಪ ಬೇಸತ್ತ ದನಿಯಲ್ಲಿ ಹೇಳಿದನು. ಹೊನ್ನಮ್ಮ ನಿಡಿದಾಗಿ ಉಸಿರೊಂದನ್ನು ಬಿಟ್ಟಳು. ಮೊಣಕಾಲ ಮೇಲೆ ತಲೆಯಿಟ್ಟು ಕುಳಿತಳು. ಮಾದಪ್ಪ ಅದೇನನೋ ಯೋಚಿಸುತ್ತ, ನಿಧಾನವಾಗಿ–ಚೂರುಚೂರಾಗಿ ರೊಟ್ಟಿಯನ್ನು ಮುರಿಯುತ್ತ, ಮೆಲ್ಲಗೆ ತಿನ್ನತೊಡಗಿದನು. ನಡುನಡುವೆ ಒಂದೊಂದು ಸಲ ಬಾಯೂ ನಿಲ್ಲುತ್ತಿದ್ದಿತು. ಕೈಯೂ ನಿಲ್ಲುತ್ತಿದ್ದಿತು.

ತಗ್ಗಿದ ದನಿಯಲ್ಲಿ ಹೊನ್ನಮ್ಮ ಮಾತನಾಡಿದಳು. "ಬಲು ಚಳಿ; ರಾತ್ರಿಯಲ್ಲಿ ಹುಡುಗರು ನಿದ್ದೆಯನ್ನೇ ಮಾಡುವುದಿಲ್ಲ."

ಮಾದಪ್ಪ ತಡೆದು ತಡೆದು ಬಾಯಾಡಿಸುತ್ತಿದ್ದನು. ಒಂದೆರಡು ನಿಮಿಷ ಮಾತನಾಡಲೇ ಇಲ್ಲ. ಬಳಿಕ ಒಮ್ಮೆಲೆ ಏನೋ ನೆನಪಾದಂತೆ ಮಾತನಾಡಲು ತೊಡಗಿದ. "ನನ್ನ ಕಂಬಳಿ ಇದೆಯಲ್ಲ ! ಅದನ್ನಿಂದು ಮನೆಯಲ್ಲಿಯೇ ಬಿಟ್ಟುಹೋಗುತ್ತೇನೆ. ಲಕ್ಕಣ್ಣ ಚಿಕ್ಕ, ಇಬ್ಬರೂ ಅದನ್ನು ಹೊತ್ತುಕೊಳ್ಳಲಿ; ನನ್ನ ಉಟ್ಟುಕೊಳ್ಳುವ ದೊತರ

ಮಡಿಸಿ ಹುಡುಗಿಗೆ ಹೊದಿಸು. ಪುಟ್ಟಣ್ಣನಂತೂ ನಿನ್ನ ಮಗ್ಗಿಲಲ್ಲಿಯೇ ಮಲಗುವನು. ''

'' ನಿಮಗೆ ಬೇಡವೇನು ಕಂಬಳಿ ? ''

'' ನನ್ನದು ಹೇಗಾದರೂ ಆಗುವುದು. ಅಲ್ಲಿಯೇ ಏನಾದರೂ ಸರಿಮಾಡಿಕೊಳ್ಳುವೆನು. ''

ಮಾದಪ್ಪನ ಎರಡು ರೊಟ್ಟಿಯ ಊಟ ಮುಗಿಯಿತು. ಮೇಲೆ ಒಂದು–ಒಂದೂವರೆ ತಂಬಿಗೆಯಷ್ಟು ನೀರನ್ನಿಳಿಸಿದ. ಹೊಟ್ಟೆಯಲ್ಲಿಯ ತೆರವಿದ್ದ ಭಾಗವನ್ನು ತುಂಬಿಕೊಂಡ. ಊಟಮಾಡಿ ಎದ್ದವನೇ ಕೆಲಸಕ್ಕೆಂದು ಯಜಮಾನರ ಮನೆಯ ಹಾದಿಯನ್ನು ಹಿಡಿದ.

೪

ಪುರುಷೋತ್ತಮ ನಾಯಕರು ಕೊಂಚ ರಸಿಕರು; ಸವಿಗಾರರು. ಅವರಿಗೆ ಸಂಗೀತ ಸೇರುವುದು; ಆದರೆ ಸೇರುವುದು ಶಾಸ್ತ್ರೀಯವಾಗಿ ಹಾಡುವ ಸಂಗೀತಗಾರರದಲ್ಲ; ಗೋಮಾಂತಕದ ನಾಯಕಸಾನಿಯರ—ನರ್ತನಸಹಿತವಾದ ಅಪ್ಸರ ಸಂಗೀತ. ಸ್ತ್ರೀಮಿಶ್ರಿತ ಸಂಗೀತ ನಾಟಕಗಳು ಬಂದಾಗ, ಅವರ ರಂಗಭೂಮಿಯ ಉದ್ಧಾರದ ಕಳವಳಕ್ಕೆ ಕಳೆಯೇರಿ, ಔದಾರ್ಯವು ತಲೆದೋರುವುದು. ಸಿನೇಮಾ ಕಂಪನಿಗಳ ಮಾಲಕರಿಗೆ ನಾಯಕರಂತಹ ನೂರಾರುಜನ ಪ್ರೇಕ್ಷಕರು ದೊರೆತರೆ, ಅವರು ಕಣ್ಣುಮುಚ್ಚಿಕೊಂಡು ಕಂಪನಿಗಳನ್ನು ನಡೆಯಿಸಬಹುದು. ರವಿವರ್ಮನ ಉತ್ತಾನ ಶೃಂಗಾರದ ಚಿತ್ರಗಳನ್ನು ಹೆಚ್ಚಾಗಿ ನೋಡಬೇಕೆಂದು ಅಪೇಕ್ಷಿಸುವವರು, ನಾಯಕರ ಮನೆಗೆ ಬಂದು ಬಿಟ್ಟರೆ ಸರಿ! ಉಪಹಾರಗೃಹದ ಯಜಮಾನರ ಆದಾಯದಲ್ಲಿ ಎಷ್ಟೋ ಭಾಗವನ್ನು ನಾಯಕರ ದುಡ್ಡು ಆಕ್ರಮಿಸುತ್ತಿದ್ದಿತು.

ಇಂದು '' ರೊಮ್ಯಾಂಟಿಕ್ ಗರ್ಲ್ '' ಎಂಬ ನೂತನ ನೂತನ ಚಲಚ್ಚಿತ್ರಪಟದ ಪ್ರದರ್ಶನ. ನಾಯಕರು ಹೋಗಲೇಬೇಕು. ಅವರು

ಹೋಗುವುದೆಂದರೆ, ಯಾವಾಗಲೂ ಎರಡನೆಯ ಸಲದ ಪ್ರದರ್ಶನಕ್ಕೆ. ಮೊದಲನೆಯದಕ್ಕೆ ಹೋಗುವುದರಲ್ಲಿ ತಮಾಷೆಯಿಲ್ಲವೆಂದು ನಾಯಕರ ಅಭಿಪ್ರಾಯ. ಈ ಅಭಿಪ್ರಾಯದ ರಹಸ್ಯವೇನೋ ಅವರಿಗೇ ಗೊತ್ತು; ನಮಗೇನೂ ಅದು ತಿಳಿಯದು.

ಎಂಟುಗಂಟೆ ರಾತ್ರಿಯಾಗಿರಬಹುದು. ನಾಯಕರು ಸಿನೇಮಾ ನೋಡಲಿಕ್ಕೆ ಹೋಗುವವರು; ಬೇಗನೆ ಊಟಕ್ಕೆ ಕುಳಿತರು. ಅಡಿಗೆಯಾಕೆಯಿದ್ದರೂ ಬಡಿಸುವ ಕೆಲಸವನ್ನು ನಾಯಕರ ಹೆಂಡತಿಯೇ ಮಾಡುತ್ತಿದ್ದಳು. ಇಲ್ಲಿ ಮಧ್ಯೆ ಒಂದು ಮಾತನ್ನು ಹೇಳಬೇಕಾಗಿದೆ. ನಾಯಕರು ಇಷ್ಟೊಂದು ರಸಿಕರಿದ್ದರೂ, ಹೆಂಡತಿಯನ್ನು ಜೊತೆಗೊಂಡು ಸಿನೇಮಾ ನಾಟಕಗಳಿಗೆ ಎಂದೂ ಹೋಗುತಿರಲಿಲ್ಲ. ಆಕೆ ನೋಡಬೇಕೆಂದು ಅಪೇಕ್ಷೆಪಟ್ಟರೆ, ಯಾರನ್ನಾದರೂ ಜೊತೆಮಾಡಿ ಕಳುಹಿಸುವರು. ಅದಕ್ಕೆ ಯಾವಬಗೆಯ ತಡೆಯನ್ನೂ ಮಾಡರು. ತಾವು ಹೋಗುವುದು ಯಾವಾಗಲೂ ಒಂಟಿಗರಾಗಿಯೆ.

ಒಳಗೆ ನಾಯಕರ ಊಟನಡೆದಾಗ, ಮಾದಪ್ಪ ನಾಯಕರು ಮಲಗುವ ಕೋಣೆಯ ಕಸಗೂಡಿಸಿ, ಹಾಸಿಗೆಹಾಸುವ ಕೆಲಸದಲ್ಲಿದ್ದ. ಅಂದು ಅವನ ತಲೆಯಲ್ಲಿ ಅನೇಕ ವಿಚಾರಗಳ ಎಡೆಯಾಟ ನಡೆದಿದ್ದಿತು. ಸಮಾಜದಲ್ಲಿ ಕಂಡು ಬರುತ್ತಲಿದ್ದ ಆರ್ಥಿಕವಿಷಮತೆಯ ಬಗೆಗೆ ಉದ್ವೇಗಗೊಂಡು, ಒಮ್ಮೆ ದೇವರನ್ನು ಮನಸಾರೆ ದೂರುವನು. ಇನ್ನೊಮ್ಮೆ ವಿರಕ್ತಭಾವದಿಂದ "ಪುಣ್ಯವಂತರಿಗೆ ಎಲ್ಲವೂ ಅನುಕೂಲವಾಗಿರುತ್ತದೆ; ಪಾಪಿಗಳಿಗೆ ಪ್ರತಿಕೂಲವಾಗಿರುತ್ತದೆ. ಅವರವರ ಹಣೆಯಬರೆಹದ ಫಲ" ಎಂದು ನಿಟ್ಟುಸಿರಿಡುವನು. "ನಾನೂ ಒಬ್ಬ ಹೆಂಡತಿಗೆ ಗಂಡನಾಗಿದ್ದೇನೆ. ನಾಲ್ಕೈದು ಜನ ಮುದ್ದುಮಕ್ಕಳಿಗೆ ಮಮತೆಯ ತಂದೆಯಾಗಿದ್ದೇನೆ." ಎಂದು ಹೆಮ್ಮೆಯಿಂದ ಹಿಗ್ಗುವನು. ಮರುಕ್ಷಣದಲ್ಲಿಯೆ "ಅಯ್ಯೋ! ಅವರೆಲ್ಲರ ಮನಸ್ಸು ತಣಿ

ಯುವಂತೆ ಪೋಷಿಸುವ ಶಕ್ತಿ ನನ್ನಲ್ಲಿಲ್ಲವಲ್ಲ ! " ಎಂದು ತಗ್ಗುವನು. ' ನಾನು ಇಷ್ಟೊಂದು ಮನಗೊಟ್ಟು ಕೆಲಸ ಮಾಡಿದರೂ, ಯಜಮಾನರಿಗೆ ಅದರ ಬೆಲೆಯೇ ಕಾಣುವುದಿಲ್ಲವಲ್ಲ ! " ಎಂದು ಸಂತಾಪಗೊಳ್ಳುವನು. " ಪಸೋ-ವಿಚಾರ ಮಾಡೋಣ,—ಎಂದಿದ್ದಾರೆ. ಈ ಸಲ ಖಂಡಿತವಾಗಿ ಏನಾದರೂ ಹೆಚ್ಚಿಗೆ ಕೊಡಬಹುದು " ಎಂದು ಸಂತವಿಟ್ಟುಕೊಳ್ಳುವನು. ಇಂದಿನ ಆತನ ದೇಹದ ಕೆಲಸವೆಲ್ಲವೂ ಆವೆಯ ನಡಿಗೆಯಲ್ಲಿ ಸಾಗಿದ್ದಿತು. ಮನಸ್ಸಿನ ಕೆಲಸವು ಮಿಂಚಿನ ವೇಗದಿಂದ ನಡೆದಿದ್ದಿತು. ಕಿರುಮನೆಯ ಕಸಗೂಡಿಸಿ ಆಯಿತು; ಶಯ್ಯೆಯನ್ನು ಸಿದ್ಧಗೊಳಿಸಲು ತೊಡಗಿದ.

ಎರಡಂಕಣದಗಲದ ಕರಿಯ ಮರದ ಮಂಚ. ಮಂಚದ ಮೇಲೆ ದಪ್ಪಗಿನ ರತ್ನಗಂಬಳಿ. ಅದರ ಮೇಲೆ, ಬಣ್ಣಬಣ್ಣದ ನೂಲಿನಿಂದ ಚಿತ್ರದ ಕೆಲಸ ಮಾಡಿದ-ಅಂದವಾದ ಜಮಖಾನೆ. ಜಮಖಾನೆಯ ಮೇಲೆ ಮೊಣಕಾಲೆತ್ತರದ- ಮೆದುವಾದ- ರೇಶ್ಮೆಯಬಟ್ಟೆಯ ಗಾದಿ. ಬೆಳುವಕ್ಕಿಯ ಬೆಳುಪನ್ನೇ ಒಟ್ಟುಗೂಡಿಸಿ ಮಾಡಿದಂತಹ ಮಗ್ಗಿಲ್ಲಾಸಿಗೆ. ಹೊತ್ತುಕೊಳ್ಳುವುದಕ್ಕೆ ಬೇರೆ ಬೇರೆ ಎರಡು ಜೊತೆಗಳು. ಮೇಲೆ ಇಟಲೀ ದೇಶದ-ದಪ್ಪಗಿದ್ದರೂ ಮೆದುವಾಗಿದ್ದ ರಗ್ಗು. ಅದರ ಕೆಳಗೆ ಕಾಶ್ಮೀರದ ಶಾಲು. ಅದರ ಒಳಗಡೆಗೆ ಹೂವಿನ ಹಚ್ಚಡ (ಚಾದರ). ಮಂಚದ ಮೇಲ್ಬದಿಗೆ ಕಟ್ಟಿದ ಹುರಿರೇಶಿಮೆಯ ಹೆಣಿಕೆಯ ಸೊಳ್ಳೆಯ ಪರದೆಯು, ಅಪರೂಪವಾಗಿ ನೋಡಲಿಕ್ಕೆ ಸಿಕ್ಕುವಂತಹದು.

ಪ್ರತಿದಿನವೂ ಹಾಸಿಗೆಯನ್ನು ಅನುಗೊಳಿಸುವವನು ಮಾದಪ್ಪನೆ. ಆದರೆ ಇಷ್ಟು ದಿನವೂ ಹಾಸಿಗೆ ಹಾಸುತಿರುವಾಗ ಆತನ ಮನವು ನಿರ್ವಿಕಾರಿ, ನಿರ್ವಿಚಾರಿ. ಇಂದು ಮಾತ್ರ ಈ ಮಂಚ, ಈ ಹಾಸಿಗೆ, ಈ ಹೊದ್ದಿಕೆ, ಸೊಳ್ಳೆಯ ಪರದೆ, ಒಂದೊಂದೂ ಆತನ

ಎದೆಯಲ್ಲಿ ಆಳತೆಯಿಲ್ಲದಷ್ಟು ಅಲೆಗಳನ್ನು ಎಬ್ಬಿಸಿದುವು. "ದೇವಾ! ಈ ಎಲ್ಲ ವೈಭವದ ನೂರರಲ್ಲಿ ಒಂದು ಪಾಲನ್ನಾದರೂ ನನಗೆ ಕೊಡ ಬಾರದಿದ್ದಿತೇ? ಅಷ್ಟರಲ್ಲಿ ನಿಜವಾಗಿಯೂ ನಾನು ತೃಪ್ತಿಪಟ್ಟು ಕೊಂಡು ಇರುತ್ತಿದ್ದೆ. ನನ್ನ ಸಲುವಾಗಿಯೆ ನಾನು ಯಾವುದನ್ನೂ ಬಯಸುವುದಿಲ್ಲ. ನನ್ನನ್ನು ನಂಬಿಕೊಂಡು ಆ ಅಷ್ಟು ಜೀವಿಗಳಿರು ವುವಲ್ಲ. ಅವಕ್ಕೆಲ್ಲ ಸೌಖ್ಯದ ಸಾಮಗ್ರಿಗಳನ್ನು ಒದಗಿಸಿ ಕೊಡು ವುದು ನನ್ನ ಕರ್ತವ್ಯವಲ್ಲವೇ?" ಎಂದು ಯೋಚಿಸಿದನು. ಹೊರ ಗಣ್ಣಿಂದ ನಾಯಕರ ಶಯ್ಯೆಯ ವೈಭವದ ಚಿತ್ರವನ್ನು ನೋಡು ತ್ತಿದ್ದ. ಒಳಗಣ್ಣಿಂದ ತನ್ನ ಹೆಂಡತಿ ಮಕ್ಕಳು ಹರಕುಚಾಪೆಯ ಮೇಲೆ ಬಿದ್ದುಕೊಂಡು, ಹೊದ್ದುಕೊಳ್ಳಲಿಕ್ಕೆ ಇಲ್ಲದೆ ಚಳಿಯಿಂದ ನಡುಗುತ್ತಿರುವ ಚಿತ್ರವನ್ನು ನೋಡುತ್ತಿದ್ದ. ಒಳಗಣ್ಣಿನ ಚಿತ್ರದಲ್ಲಿ ನಡುಗುತ್ತ ಬಿದ್ದಿದ್ದ ಹೆಂಡತಿಮಕ್ಕಳೊಡನೆ ಮಾದಪ್ಪನೂ ನಡು ಗಿದ. "ಮಕ್ಕಳು ಹುಟ್ಟಿದಂದಿನಿಂದ ಹಾಲುಹೈನದ ಮುಖ ನೋಡಿಲ್ಲ! ಮೈಗೆ ಹೊಸ ಬಟ್ಟೆಯ ಸೋಂಕು ಇಲ್ಲ! ಇಂತಹ ಹಾಸಿಗೆ ಅವರಿಗಿದ್ದರೆ ಅದೆಷ್ಟು ಸುಖವಾಗಿ ನಿದ್ದೆಮಾಡಬಹುದಾಗಿದ್ದಿತಲ್ಲ! ನನ್ನ ಮಕ್ಕಳಾಗಿ ಏತಕ್ಕೆ ಹುಟ್ಟಿದರೋ!" ಎಂದು ಯೋಚಿಸುತ್ತಿ ರುವಾಗ ಮಾದಪ್ಪನ ಮೂಗಿನಿಂದ ಬಿಸಿಯಾದ ಉಸಿರು ಹೊರಡು ತಿದ್ದಿತು. ಕಣ್ಣೀರು ಧಾರೆಗಟ್ಟಿದ್ದುವು. ಕಲ್ಪನಾಪ್ರಪಂಚದಲ್ಲಿಯೆ ಮಾದಪ್ಪ, ಒಮ್ಮೆ ತನ್ನ ಮಕ್ಕಳನ್ನೆಲ್ಲ ಇಂತಹ ಮೆಲುವಾಸುಗಳ ಮೇಲೆ ಮಲಗಿಸಿ ತಣಿದ. ಹೆಂಡತಿಯೊಡನೆ ತಾನೂ ಮಲಗಿದ; ಒರಿ ಗೈಯನ್ನು ಸುರಿದುಂಡವನ ಸೌಖ್ಯವನ್ನು ಅನುಭವಿಸಿದ. ಊಟಕ್ಕೆ ಕುಳಿತ ನಾಯಕರು ಹೆಂಡತಿಯೊಡನೆ ಆಡುತಿದ್ದ ಸರಸಮಾತುಗಳೂ, ನಗುವ ನಗೆಯೂ, ತನ್ನ ಯೋಚನೆಯಲ್ಲಿಯೆ ಮುಳುಗಿ ಹೋಗಿದ್ದ ಮಾದಪ್ಪನ ಕಿವಿಗೆ ಮಾತ್ರ ಕೇಳುತ್ತಿದ್ದುವು; ಮನಸ್ಸನ್ನು ಮುಟ್ಟು ತ್ತಿರಲಿಲ್ಲ.

## ೫

ನಾಯಕರ ಹೆಂಡತಿ, ತನ್ನ ಊಟಉಡಿಗೆ ತೀರಿಸಿಕೊಂಡು ಮಲಗುವ ಕೋಣೆಗೆ ಬಂದಳು. ಬಿಗಿಯಾದ ಮುಸುಕಿಟ್ಟುಕೊಂಡು ಹಾಸಿಗೆಯ ಮೇಲೆ ಮಲಗಿದ ನಾಯಕರನ್ನು ನೋಡಿದಳು. ಮಲಗಿದವರ ದೇಹದ ಯಾವ ಭಾಗವೂ ಹೊರಕ್ಕೆ ಕಾಣುತ್ತಿರಲಿಲ್ಲ. ಗಾಢ-ನಿದ್ರೆಗೆ ಗುರುತಾದ ಗುರುಗುರಿಕೆ ಮಾತ್ರ ಕೇಳುತ್ತಿದ್ದಿತು. ನೋಡಿ ಆಕೆಗೆ ಆಶ್ಚರ್ಯವಾಯಿತು. ಕೊಂಚ ಗಟ್ಟಿಯಾಗಿ ತನ್ನಲ್ಲಿ ತಾನೇ ಮಾತನಾಡಿದಳು. "ಸಿನೇಮಾಕ್ಕೆ ಹೋಗುತ್ತೇನೆ — ಅನ್ನುತ್ತಿದ್ದರಲ್ಲ ಇವರು!" ಈ ಮಾತು ಮಲಗಿದ್ದ ಅವರ ನಿದ್ರೆಗೆ ಯಾವ ಆತಂಕವನ್ನೂ ಉಂಟುಮಾಡಲಿಲ್ಲ. ನಾಯಕರ ಹೆಂಡತಿ ಮನಸ್ಸಿನಲ್ಲಿ ಯೋಚಿಸಿದಳು "ಸರಿ! ನಿನ್ನೆಯೂ ರಾತ್ರಿ ಮೂರುಗಂಟೆಯ ವರೆಗೆ ಮನೆಗೆ ಬಂದಿರಲಿಲ್ಲ. ಜಾಗರಣೆಯಾಗಿರಬಹುದು. ನಿದ್ದೆ ಬಂದಿತೇನೊ! ಚಳಿಯೂ ತುಂಬ ಬಿದ್ದಿದೆ. ಎಂತಲೇ ಇಂದು ಸಿನೇಮಾಕ್ಕೆ ಹೋಗದೆ ಮಲಗಿ ಬಿಟ್ಟಿದ್ದಾರೆ ಕಾಣುತ್ತದೆ. ಒಳ್ಳೆಯದೇ ಆಯಿತಲ್ಲ!" ಉರಿಯುತ್ತಿದ್ದ ದೀಪವನ್ನು ಸಣ್ಣಗಾಗಿ ಮಾಡಿದಳು. "ಹು ಹು ಹೂ" ಎಂದು ಗಟ್ಟಿಯಾಗಿ ನಡುಗುತ್ತ—ತನ್ನ ಈ ದನಿಗೆ ಮಲಗಿದ್ದ ಗಂಡನಿಗೆ ಎಚ್ಚರವಾಗಬೇಕೆಂಬ ಉದ್ದೇಶವಿದ್ದರೂ ಇರಬಹುದು—ತನಗಾಗಿ ಇದ್ದ ಹೊದ್ದಿಕೆಯನ್ನು ಮುಸುಕಿಟ್ಟು ಮಲಗಿಕೊಂಡಳು. ಐದಾರು ನಿಮಿಷಗಳಲ್ಲಿಯೇ ಆಕೆಯನ್ನೂ ನಿದ್ದೆಯು ಆವರಿಸಿ ಬಿಟ್ಟಿತು. ನಿಶ್ಚಿಂತರಾದವರಿಗೆ ನಿದ್ರಾದೇವಿ ಸ್ನೇಹಿತೆಯಲ್ಲವೇ?

ನಾಯಕರ ಹೆಂಡತಿಯ ಮನಸ್ಸು ಶರತ್ಕಾಲದ ನದಿಯ ನೀರಿನಂತಹದು. ಹಸುಮಗುವಿನಂತಹ ಸರಳವಾದ ಸ್ವಭಾವ. ಆಗರ್ಭ ಶ್ರೀಮಂತರ ಮನೆಯಲ್ಲಿ ಹುಟ್ಟಿದವಳು. ಆಗರ್ಭ ಶ್ರೀಮಂತನ ಕೈಯನ್ನೇ ಹಿಡಿದವಳು. ಜಗತ್ತಿನಲ್ಲಿ ಬಡತನವೆಂಬುದೊಂದು

ಇದೆಯೆಂಬ ಮಾತು, ಆಕೆಯ ಮೆದುಳನ್ನು ಇದುವರೆಗೂ ಮುಟ್ಟಿರ
ಲಿಲ್ಲ. ತಮ್ಮ ಆಳು ಮಾದಪ್ಪನಿಗೆ, ತಾವು ಒಂಬತ್ತುರೂಪಾಯಿ
ಮಾತ್ರ ಸಂಬಳ ಕೊಡುವೆವೆಂಬ ಮಾತು ಆಕೆಗೆ ಗೊತ್ತಿದ್ದರೂ, ಮಾದ
ಪ್ಪನ ಮನೆಯಲ್ಲಿಯೂ ತಮ್ಮ ಮನೆಯಂತೆಯೆ—ಇದ್ದರೆ ಸ್ವಲ್ಪ
ಕಡಿಮೆ ಇರಬಹುದು—ಊಟ-ಉಡಿಗೆ ಆಗುತಿರಬಹುದೆಂದು ಆಕೆಯ
ಭಾವನೆ. ಬಡವರು ಪಡುತಿರುವ ಕಷ್ಟನಿಷ್ಠುರಗಳನ್ನು ಕನಸಿನಲ್ಲಿಯೂ
ಕಂಡರಿಯಳು. ಹೆಚ್ಚಿಗೆ ಓದುಬರೆಹ ಕಲಿತವಳಲ್ಲ. ತವರಮನೆಯವರು
ಸಂಪ್ರದಾಯವಂತರು. ದಾಂಪತ್ಯ ಜೀವನದಲ್ಲಿಯ ಹೊಸಬಗೆಯ
"ರೋಮಾನ್ಸ" ನ್ನು ಕೊಂಚವೂ ಅರಿತವಳಲ್ಲ. ಗಂಡ ರೂಪಯುತ
ನಿದ್ದಾನೆ; ಧನವಂತನಿದ್ದಾನೆ; ಉಡತೊಡಲಿಕ್ಕೆ ಬೇಕಾದಷ್ಟಿದೆ; ತಿನ್ನು
ಣ್ಣಲಿಕ್ಕೆ ತೊಂದರೆಯಿಲ್ಲ;ಮನೆಯಲ್ಲಿ ತನ್ನದೆ ಸಂಪೂರ್ಣ ಸ್ವಾತಂತ್ರ್ಯ.
ಸಂಸಾರದ ಅನುಭವವು ಸಾಕಷ್ಟು ಇಲ್ಲದ, ಎಳಮುಗುವಿನಂತಹ ಆ
ಹೆಣ್ಣುಮಗಳಿಗೆ, ತನ್ನ ಜೀವನವು ಸರ್ವಾಂಗ ಸಂಪೂರ್ಣವಾದುದು,
ಎಂದು ಎನಿಸಿದ್ದಿತೇನೋ ! ನಾಯಕರು ತನ್ನ ವಿಷಯವಾಗಿ ತೋರಿ
ಸುತ್ತಿದ್ದ ಪ್ರೀತಿಯಿಂದ ಆಕೆ ಸಂಪೂರ್ಣವಾಗಿ ತೃಪ್ತಳು;ಆದರೆ ಪತಿಯ
ವಿಷಯಕವಾಗಿ ತನ್ನ ಹೃದಯದಲ್ಲಿದ್ದ ಪ್ರೇಮದ ಬಗೆಯನ್ನೂ,
ಪತಿಯು ತನ್ನ ವಿಷಯದಲ್ಲಿ ತೋರಿಸುತ್ತಿದ್ದ ಪ್ರೇಮದ ಬಗೆ
ಯನ್ನೂ, ತುಲನೆಮಾಡಿನೋಡುವ ವಿಮರ್ಶಾತ್ಮಕ ಬುದ್ಧಿಯು ಆಕೆ
ಯಲ್ಲಿದ್ದರೆ, ತನ್ನ ದಾಂಪತ್ಯಜೀವನದಲ್ಲಿ ಕೊರತೆಯಿದೆಯೆಂದು ತಿಳಿ
ಯಬಹುದಾಗಿದ್ದಿತೇನೋ ! ಅಂತಹ ಬುದ್ಧಿ ಇಲ್ಲದುದರಿಂದಲೆ ಆಕೆ
ಸದಾ ಉಲ್ಲಾಸಿನಿ. ಚಿಂತೆಯ ಸ್ವರೂಪವನ್ನೇ ಕಾಣದವಳು.
ದಾಂಪತ್ಯಜೀವನದಲ್ಲಿ ತೊಡಕುತೊಂದರೆಗಳು ಬರುವುದಾವಾಗ !
ತೀರ ವಿಷಮದಾಂಪತ್ಯವಾದಾಗ ! ಆದರ್ಶದಾಂಪತ್ಯವನ್ನಪೇಕ್ಷಿಸಿ,
ಗಂಡಹೆಂಡಿರಿಬ್ಬರೂ ಪರಸ್ಪರರ ಪ್ರೇಮವನ್ನು ಒರೆಗೆ ಹಚ್ಚಿ ನೋಡು

ವಾಗ. ಇವೆರಡರ ನಡುವಿರುವ ಮೂರನೆಯ ಬಗೆಯ ದಾಂಪತ್ಯದಲ್ಲಿ ತೊಡಕಿಗೆ ಎಡೆಯೇ ಇಲ್ಲ. ಅಲ್ಲಿ ನಿಶ್ಚಿಂತೆಯೇ ಯಾವಾಗಲೂ ನೆಲಸಿರುವುದು. ಆದರೆ ಆ ನಿಶ್ಚಿಂತೆ, ಮಾನವೀಯ ನಿಶ್ಚಿಂತೆಯಲ್ಲ; ಪಾಶವ ನಿಶ್ಚಿಂತೆ. ನಾಯಕರ ಹೆಂಡತಿಯ ನಿಶ್ಚಿಂತೆಯೂ ಇದೇ ಬಗೆಯದು. ಎಂತಲೇ ಆಕೆ ಮಲಗಿದೊಡನೆಯೆ ನಿದ್ದೆಮಾಡತೊಡಗಿದಳು. ಆಕೆ ಕನಸುಗಳನ್ನು ಕಂಡರೂ "ಹೊಸ ಹೊಸ ತೊಡವು ಮಾಡಿಸಿದಂತೆ, ಬಟ್ಟೆಬರೆ ತೆಗೆದುಕೊಂಡಂತೆ, ಸವಿಸವಿಯ ತಿನಿಸು ತಿಂದಂತೆ, ಗಂಡನೊಡನೆ ಸರಸದ ನಗೆಮಾತನಾಡಿದಂತೆ, ಇತ್ಯಾದಿ ಇಂತಹ ಕನಸುಗಳನ್ನೇ ಕಾಣುತಿರಬಹುದು.

೬

ಸುಮಾರು ಒಂದುಗಂಟೆ ರಾತ್ರಿಯಾಗಿರಬಹುದು. ಇದ್ದಕ್ಕಿದ್ದ ಹಾಗೆಯೆ ಹಾಕಿಕೊಂಡಿದ್ದ ಮುಸುಕನ್ನು ಯಾರೋ ಭರದಿಂದ ಸೆಳೆದಂತಾಯಿತು; ನಾಯಕರ ಹೆಂಡತಿ ಬೆಚ್ಚಿಬಿದ್ದು ಎದ್ದು ಕುಳಿತು, ಕಣ್ಣು ತಿಕ್ಕಿಕೊಳತೊಡಗಿದಳು. ಇನ್ನೂ ಅವಳನ್ನು ನಿದ್ದೆ ಪೂರ್ಣವಾಗಿ ಬಿಟ್ಟಿರಲಿಲ್ಲ. ಅರೆನಿದ್ದೆಯಲ್ಲಿಯೇ ತನ್ನ ಗಂಡನ, ಕೋಪದಿಂದ ಕರ್ಕಶವಾಗಿದ್ದ ಪ್ರಶ್ನೆಯೊಂದು ಕಿವಿಗೆ ಬಿದ್ದಿತು.

"ಏನು? ಯಾರು....ನಿನ್ನ ಬಳಿಯಲ್ಲಿ ಮಲಗಿದವರು ?"

ಕಣ್ಣು ತಿಕ್ಕುತ್ತಲೆ ನಿದ್ದೆಯಿಂದ ಜಡವಾದ ದನಿಯಲ್ಲಿ ಆಕೆ ಹೇಳಿದಳು.

"ನೀ–ವೇ–ಅಲ್ಲವೇ–?"

ಸಿಡಿಲಿನ ಸಪ್ಪಳದಂತೆ ಇನ್ನೊಂದು ಮಾತು ಕೇಳಿಸಿತು.

"ಇಲ್ಲಿ ನಿಂತು ಕೂಗುವವನೂ ನಾನೇ; ಅಲ್ಲಿ ಮಲಗಿ ನಿದ್ರಿಸುವವನೂ ನಾನೇ ಏನು ?

ನಾಯಕರ ಹೆಂಡತಿ, ಈಗ ಸಂಪೂರ್ಣವಾಗಿ ಎಚ್ಚತ್ತು, ಮೇಲಕ್ಕೆ ಮೊಗವೆತ್ತಿ ನೋಡಿದಳು. ತನ್ನ ಗಂಡ. ತಾನೆಂದೂ

ಸೋತನಂತಹ ಮುಖವು ಅವನದು. ಕಣ್ಣಿಂದ ಕಿಡಿಗಳುದುರುತ್ತಿವೆ. ಮೂಗು ಮುಸುಗುಟ್ಟುತ್ತಲಿದೆ. ದೇಹವು ಥರ ಥರ ಕಂಪಿಸುತ್ತಲಿದೆ. ಆ ಕೆರಳಿದ ಕಣ್ನೋಟವನ್ನು ಕಂಡು ಆಕೆ ಭೀತಿಯಿಂದ ನಡುಗಿದಳು. ಅಂಜಿನ ವೇಗದಿಂದ ಮಂಚದಿಂದಿಳಿದು ಕೆಳಗೆ ನಿಂತು, ಗಾಬರಿಯ ದನಿಯಲ್ಲಿ ಕೇಳಿದಳು. "ಏನು ? ಏನಾಯಿತು ?"

"ಏನೂ ಆಗಿಲ್ಲ ! ಅಲ್ಲಿ ಮುಸುಕಿಕ್ಕಿ ಮಲಗಿದವರು ಯಾರು?" ಕ್ರೋಧದ ಕುಲುಮೆಯೊಳಗಿಂದ ಕಾದು ಕಾದು ಹೊರಟ ಶಬ್ದಗಳಿವು.

ನಾಯಕರ ಹೆಂಡತಿ ಅತ್ತ ಕಡೆಗೆ ನೋಡಿದಳು. ತಾನು ಮಲಗುವ ಮೊದಲು ನೋಡಿದ್ದ ಮನುಷ್ಯ, ಮೊದಲಿನಂತೆಯೆ ಮಲಗಿ ಗೊರಿಕೆಹೊಡೆಯುತ್ತಲಿದ್ದಾನೆ. ಆಕೆಗೆ ಯಾವುದೂ ತಿಳಿಯದಾಯಿತು. ಮುಖವು ಹುಚ್ಚಿಟ್ಟಿತು. ಬಾಯಿಂದ ಮಾತುಗಳೇ ಹೊರಡಲೊಲ್ಲುವು.

ನಾಯಕರು ಮತ್ತೆ ರೋಷದ ರಭಸದಿಂದ ಕೇಳಿದರು. "ಏನು ? ಮಾತನಾಡುವುದಿಲ್ಲವೇ ? ಇವರು ಯಾರು ?"

ಆಕೆಯ ಬಾಯಿಂದ, ನಡುಗುತಿರುವ ದನಿಯಲ್ಲಿ ತಡೆದು ತಡೆದು, ಮಾತೊಂದು ಹೊರಬಿದ್ದಿತು. "ನಾನು ಕಾಣೆ, ಯಾರೋ ಏನೋ....

ಅವಡುಗಚ್ಚಿ ನಾಯಕರು ಕೇಳಿದರು. "ನೀನು ಕಾಣೆಯಾ? ಏನು ! ನಿನಗೆ ಗೊತ್ತಿಲ್ಲವೆ ?

ಅರೆಸತ್ತವಳಾಗಿ ಆಕೆ ಹೇಳಿದಳು. "ನೀವೇ ಎಂದು ನಾನು ತಿಳಿದಿದ್ದೆ." ಆಕೆಯ ಅಂಗಾಂಗಗಳೂ ಆಕೆಯ ನಿರಪರಾಧಿತ್ವವನ್ನು ನಾಯಕರಿಗೆ ತಿಳುಹಿಸಲು ತವಕಪಡುತ್ತಿದ್ದುವು; ಆದರೆ ಕ್ಷಣಕ್ಷಣಕ್ಕೂ ಹೆಚ್ಚುತ್ತಿರುವ ಕೋಪವು ಕುರುಡುಗೊಳಿಸಿದ್ದ ನಾಯಕರ ಕಣ್ಣಿಗೆ, ಅದಾವುದೂ ಕಾಣಲಿಲ್ಲ. ಆಕೆಯ ಪರಿಶುದ್ಧತೆಗಾಗಿ

ಸಾಕ್ಷ್ಯ ನುಡಿಯುತ್ತಿರುವ ಅರಳಿದ ಬೆದರುಗಣ್ಣಿನ ಮಾತುಗಳು ನಾಯಕರ ಎದೆಯನ್ನು ಹೊಗಲಿಲ್ಲ.

"ನಾನೇ ಎಂದು ತಿಳಿದಿದ್ದೆಯಾ? ತಡೆ! ಈಗ ನಾನೇ ತಿಳಿಸುತ್ತೇನೆ– ಯಾರೆಂಬುದನ್ನು." ಎಂದು ನುಡಿನುಡಿಯುತ್ತಿರುವಾಗಲೇ ನಾಯಕರು ಎಡಗೈಯಿಂದ ಹೆಂಡತಿಯ ಬಿಡುಮುಡಿಯನ್ನು ಹಿಡಿದು ಸೆಳೆದು, ಬಲಗೈಯಿಂದ ಮಲಗಿದ್ದ ಮನುಷ್ಯನ ಹೊದ್ದಿಕೆಯನ್ನು ಬಲವಾಗಿ ಜಗ್ಗಿದರು. ಮೈಮೇಲಿನ ಹೊದ್ದಿಕೆ ಹೋದರೂ ಮಲಗಿದ್ದ ವ್ಯಕ್ತಿಗೆ ಎಚ್ಚರವಾಗಲಿಲ್ಲ. ನಾಯಕರು ದುರುಗುಟ್ಟಿ ಮಲಗಿದವನನ್ನು ನೋಡಿದರು. ಎಡಗೈಯಲ್ಲಿ ಹೆಂಡತಿಯ ಹೆಳಲು ಹಾಗೆಯೇ ಇದ್ದಿತು. ಮಲಗಿದವರು ಇನ್ನಾರೂ ಅಲ್ಲ; ಆಳುಮಾದಪ್ಪ! ನಾಯಕರಿಗೆ ಮಾದಪ್ಪನೆಂದು ಗೊತ್ತಾಯಿತು. ಹೆಂಡತಿಯ ಹೆಳಲನ್ನು ಒಮ್ಮೆಲೆ ಬಿಟ್ಟುಬಿಟ್ಟರು. ಸರ್ರನೆ ಹೋಗಿ, ಮೂಲೆಯಲ್ಲಿದ್ದ ಬೆತ್ತವನ್ನು ತಂದು, ಹೊಟ್ಟೆಯೆನ್ನದೆ, ಎದೆಯೆನ್ನದೆ, ಮುಖವೆನ್ನದೆ, ಬಲವಾಗಿ ಏಟುಗಳನ್ನು ಹಾಕಿದರು. ಏಟಿನ ವ್ಯಥೆಯನ್ನು ತಾಳಲಾರದೆ "ಅಯ್ಯಯ್ಯೋ" ಎಂದು ಕೂಗುತ್ತ, ಮಲಗಿದ್ದ ಮಾದಪ್ಪ ಎದ್ದು ಕುಳಿತ. ತನ್ನ ಯಜಮಾನನ ಕೆಂಗಣ್ಣಿನ ಕ್ರೋಧದ ಮುಖವನ್ನು ಕಂಡ. ತಾನು ಮಲಗಿದ್ದ ಸ್ಥಳವನ್ನೂ ಕೆಳಗೆ, ಮೇಲೆ, ಸುತ್ತುಮುತ್ತು, ನೋಡಿದ. ತಟ್ಟನೆ ಮಂಚದಿಂದ ಕೆಳಕ್ಕಿಳಿದು, ಗದಗದನೆ ನಡುಗುತ್ತ ಕೈಮುಗಿದು, ಮುಖತಗ್ಗಿಸಿನಿಂತ. ಮಾತನಾಡಬೇಕೆಂದರೆ ನಾಲಗೆಯೇ ಏಳಲೊಲ್ಲದು.

ನಾಯಕರ ಹೆಂಡತಿಗೆ, ಇದುವರೆಗೆ ಅನುಭವಿಸದಿದ್ದ ದುಃಖವೆಲ್ಲ ಒಟ್ಟುಗೂಡಿ ಇಂದು ಎದುರಿಗೆ ಬಂದು ನಿಂತಂತಾಗಿದ್ದಿತು. ಆಕೆ ಹಸುಗೂಸಾಗಿದ್ದಾಗ ಮಾತ್ರ ಅತ್ತಿರಬಹುದು. ಅಳುವಿನ ಗುರುತೇ ಅವಳಿಗಿರಲಿಲ್ಲ. ಬಾಣಲಿಯಲ್ಲಿಯ ಎಣ್ಣೆ ಕುದಿದಂತೆ ತನ್ನ ಹೊಟ್ಟೆಯಲ್ಲಿಯೂ ಏನೋ ಕುದಿಯುತ್ತಿದೆ, ಎಂದು ಆಕೆಗೆ ಎನಿಸಿತು.

ನಿಂತುಕೊಂಡಿರಲಿಕ್ಕೆ ಬಲವು ಸಾಲದೆ, ನಿಂತಲ್ಲಿಯೆ ಕುಳಿತುಬಿಟ್ಟಳು. ನಾನೆಲ್ಲಿರುವೆನು ? ನಡೆದುಹೋದ ಸಂಗತಿಯೇನು ? ನಡೆದಿದೆಯೇನು? ಎಂಬುದಾವುದರ ಅರಿವೂ ಆಕೆಗೆ ಇದ್ದಂತೆ ತೋರಲಿಲ್ಲ. ಹುಚ್ಚಿಯಂತೆ ಮಾದಪ್ಪನ ಕಡೆಗೊಮ್ಮೆ, ಗಂಡನ ಕಡೆಗೊಮ್ಮೆ, ನೋಡುತ್ತಿದ್ದಳು. ತಾನು ನೋಡುತ್ತಿರುವುದೇನನ್ನು–ಯಾರನ್ನು, ಎಂಬುದರ ಎಚ್ಚರವೂ ಆಕೆಗಿರಲಿಲ್ಲ.

ನಾಯಕರು ಗುಡುಗಿನ ಗರ್ಜನೆಯಲ್ಲಿ ಮಾತನಾಡಿದರು.

" ಏನೋ! ನೀನೇತಕ್ಕೆ ಇಲ್ಲಿ ಮಲಗಿದ್ದೆ ? "

ನಿಂತುಕೊಂಡಂತೆಯೆ ಮಾದಪ್ಪನು ಧೊಪ್ಪನೆ ನಾಯಕರ ಕಾಲ ಮೇಲೆ ಬಿದ್ದ. ಕಣ್ಣಿಂದ ನೀರು ಸುರಿಯುತ್ತಿದ್ದುವು. ತಡೆದು ತಡೆದು ಮಾತನಾಡಿದ. " ರಾಯರೇ, ನನ್ನ ತಪ್ಪನ್ನು ಕ್ಷಮಿಸುತ್ತೀರಾ? "

ತನ್ನ ಹೆಂಡತಿಯ ಕರುಣಾವಸ್ಥೆ, ಮಾದಪ್ಪನ ಅನುತಾಪದ ಭಾವ–ಭಂಗಿ, ಇವು ನಾಯಕರನ್ನು ಮನುಷ್ಯತ್ವದ ಕಡೆಗೆ ಸೆಳೆಯಲು ತೊಡಗಿದುವು. ಮಾದಪ್ಪನ ಮನಸ್ಸೂ ವಯಸ್ಸೂ ಮನದೆದುರು ಬಂದು, ಅವರ ಬಿಗುಹುಗೊಂಡಿದ್ದ ಸಂಶಯವೃತ್ತಿ ಸಡಿಲತೊಡಗಿತು. ರೌದ್ರಸ್ವರೂಪವು ಕ್ರಮಕ್ರಮವಾಗಿ ಕಡಿಮೆಯಾಗುತ್ತ ನಡೆದಿದ್ದಿತು.

ಅಲ್ಲಿ ಮಲಗಿದ್ದವನು ಮಾದಪ್ಪ, ಎಂಬ ಸಂಗತಿ ನಾಯಕರ ಹೆಂಡತಿಗೆ ಗೊತ್ತಾದೊಡನೆ, ಆಕೆಯೂ ನಿಧಾನವಾಗಿ ಸಾವರಿಸಿಕೊಳ್ಳಲು ತೊಡಗಿದ್ದಳು. ಮಾದಪ್ಪ ಎದ್ದುನಿಂತು ಕಂಬನಿಗರೆಯುತ್ತ ನಾಯಕರನ್ನೂ, ಅವರ ಹೆಂಡತಿಯನ್ನೂ ಒಂದೊಂದು ಸಲ ನೋಡುತ್ತ ಹೇಳುತ್ತಿದ್ದನು. "ರಾಯರೇ! ನನ್ನಿಂದ ದೊಡ್ಡ ಅಪರಾಧವಾಯಿತು" ಅಮ್ಮಾ! ತಾಯೀ ! ಇದೊಂದುಸಲ ನನ್ನನ್ನು ಕ್ಷಮಿಸಿ ಬಿಡಿರಿ. "

ನಾಯಕರ ಹೆಂಡತಿಗೆ ಕೊಂಚ ಚೈತನ್ಯಬಂದಂತಾಯಿತು. ನಿರಪರಾಧವನ್ನು ಸೂಚಿಸುತ್ತಿರುವ ಕಣ್ಣುಗಳಿಂದ ನಾಯಕರನ್ನು

ನೋಡುತ್ತ ಹೇಳಿದಳು. "ನಾನು ಕಿರುಮನೆಗೆ ಬಂದಕೂಡಲೆ ಇಲ್ಲಿ ಮುಸುಕಿಕ್ಕಿ ಮಲಗಿದವರನ್ನು ನೋಡಿದೆ. ತಮಗೆ ನಿನ್ನೆ ನಿದ್ರೆ ಪೂರ್ತಿಯಾಗಿ ಆಗಿರಲಿಲ್ಲ. ಚಳಿಯೂ ಬಹಳ ಬಿದ್ದಿದ್ದಿತು. ಅದಕ್ಕಾಗಿ ಸಿನೇಮಾಕ್ಕೆ ಹೋಗದೆ, ಮಲಗಿ ಬಿಟ್ಟಿರುವರೇನೋ- ಎಂದು ಎಣಿಸಿ ನಾನೂ ಹಾಗೆಯೇ ಮಲಗಿಬಿಟ್ಟೆ."

ಹೆಂಡತಿಯ ಮಾತನ್ನು ನಾಯಕರು ಕಿವಿಗೊಟ್ಟು ಕೇಳಿದರು. ಇದರಿಂದ ಅವರಿಗೆ ಸಮಾಧಾನವೋ, ಅಸಮಾಧಾನವೋ, ಎಂಬುದಾವುದೂ ತಿಳಿಯುವಂತಿರಲಿಲ್ಲ. ಕೊಂಚ ಆರಿದ್ದ ಉರಿ ಮತ್ತೆ ಮೇಲಕ್ಕೆದ್ದಿತು. ಮಾದಪ್ಪನನ್ನು ಕೆರಳಿದ ನೋಟದಿಂದ ನೋಡುತ್ತ ಕೇಳಿದರು. "ಏನೋ....ಮಗನೇ ? ಇಲ್ಲಿ ಏತಕ್ಕಾಗಿ ಮಲಗಿದ್ದೆ ?"

ಮಾದಪ್ಪ ಮರಳಿ ಮರಳಿ ಕಾಲಿಗೆ ಬೀಳುತ್ತ ಹೇಳಿದ. 'ನನ್ನನ್ನು ಕಾಡುವ ಕಾಟ ಮಲಗಿಸಿತು ರಾಯರೇ ! ಎಂತಲೇ ಮಲಗಿದೆ. ಇದೊಂದುಸಲ ನನ್ನನ್ನು ಕ್ಷಮಿಸಿಬಿಡಿ. ಇನ್ನು ಬದುಕಿರುವವರೆಗೂ ಇಂದಿನ ತಪ್ಪಿಗಾಗಿ ಪಶ್ಚಾತ್ತಾಪ ಪಡುತ್ತಿರುವೆನು."

"ಹೆಚ್ಚಿನ ಮಾತುಗಳೀಗ ಬೇಕಾಗಿಲ್ಲ. ಇಲ್ಲಿ ಮಲಗಿದುದೇಕೆ ? ಬೊಗಳು ಮೊದಲು." ರೊಚ್ಚಿನಿಂದ ನಾಯಕರು ನುಡಿದರು.

ಮಾದಪ್ಪ ಹೇಳಲು ತೊಡಗಿದ. "ತಂದೆಯೇ ! ಇಂದು ಬೆಳಗಿನಿಂದಲೂ ಅದೇಕೋ ನನ್ನ ಮನಸ್ಸೇ ಚೆನ್ನಾಗಿಲ್ಲ. ಎಂದೂ ಇಲ್ಲದ ಆಲೋಚನೆ; ಎಂದೂ ಬಾರದ ವಿಚಾರ. ಇಂದು ತಮ್ಮ ಹಾಸಿಗೆ ಹಾಸಿ ಸಿದ್ಧಗೊಳಿಸಿದೆ. ಎಲ್ಲವನ್ನೂ ನೋಡಿಯೇ ನೋಡಿದೆ. ಅನೇಕ ವಿಚಾರಗಳು ಮನಸ್ಸಿನ ಮುಂದೆ ಬಂದುಹೋದುವು. ಕೊನೆಗೆ ನನ್ನ ದುರ್ದೈವ ಒಂದು ದುರ್ವಿಚಾರವನ್ನು ತಂದು, ಮುಂದೆ ಒಡ್ಡಿತು. "ಈ ಮೆತ್ತಗಿನ ಹಾಸಿಗೆಯ ಮೇಲೆ ಮಲಗಿ, ಈ ಬೆಚ್ಚಗಿನ ಹೊದ್ದಿಕೆಯನ್ನು ಹೊತ್ತುಕೊಂಡು ಮಲಗಿದರೆ, ಹೇಗಿರಬಹುದು ?"ಎಂದು ಆ

ಪುರ್ವಿಚಾರದಲ್ಲಿಯು ನನ್ನ ಕನವರಿಕೆ. "ಮಲಗಿ ನೋಡು, ತಿಳಿಯು ವುದು "ಎಂದು ಆ ವಿಚಾರದ ಉಪದೇಶ. ಅಶಕ್ತವಾಗಿದ್ದ ಮನಸ್ಸು ಆ ಉಪದೇಶಕ್ಕೆ ಸೋತಿತು. ಗಾದಿಯ ಮೇಲೆ ಮಲಗಿದೆ ಹೊದ್ದಿಕೆ ಹೊತ್ತುಕೊಂಡು. ಎಂದೂ ಕಾಣದ ಅನುಭವವದು ರಾಯರೇ! ಮೈಗೆ ತುಂಬ ಹಿತವೆನಿಸಿತು. "ಈಗ ಏಳಬೇಕು; ಇನ್ನು ಏಳಲೇ ಬೇಕು;" ಎಂಬ ಎಣಿಕೆಯಲ್ಲಿರುವಾಗಲೆ ನಿದ್ದೆ ಹತ್ತಿಬಿಟ್ಟಿತು. ನಿದ್ದೆ ಹತ್ತಿದುದು ಯಾವಾಗ-ಎಂಬುದುಕೂಡ ಗೊತ್ತಾಗಲಿಲ್ಲ. ತಮ್ಮ ಬೆತ್ತದ ಏಟುಗಳು ಬೀಳುವವರೆಗೂ ನನಗೆ ಎಚ್ಚರವೇ ಇಲ್ಲ ರಾಯರೇ!"

ಆಗಿನ ಮಾದಪ್ಪನ ಸ್ಥಿತಿಯನ್ನು ನೋಡಿದರೆ ಎಂತಹ ಕಲ್ಲೆದೆಯೂ ಕರಗಿ ನೀರಾಗಬೇಕು. ಆದರೆ ಮಾದಪ್ಪನಿಂದಾದ ಅಪರಾಧವು ಅಕ್ಷಮ್ಯವೆಂದು ನಿರ್ಣಯಿಸಿಯೆ ಬಿಟ್ಟಿದ್ದ ನಾಯಕರ ಎದೆಯೇನೂ ಕರಗಲಿಲ್ಲ. ಕಿಡಿಗಳನ್ನು ದುರಿಸುತ್ತಲೆ ಮಾತನಾಡಿದರು.

"ನುಂಗನ ಮಗನೇ! ನಿನಗೆ ಮುದಿಹುಚ್ಚು ಹಿಡಿದಿದೆ, ನುವಿ ಹುಚ್ಚು. ನಿನ್ನನ್ನು ಇಲ್ಲಿಯೇ ಸೀಳಿಹಾಕಿ ಬಿಡಬೇಕು ನಾನು; ಆದರೆ ಅದೀಗ ಬೇಡ. ಇನ್ನು ನೀನು ನನ್ನ ಮುಂದೆ ನಿಂತುಕೊಂಡಿರ ಬೇಡ ನಡೆ. ಇನ್ನೊಮ್ಮೆ ನನ್ನ ಮನೆಯಲ್ಲಿ ಕಾಲಿಟ್ಟರೆ, ನಿನ್ನನ್ನು ಕೊಂದುಹಾಕಿಯೇ ಬಿಡುವೆನು. ಈ ಮಗನಿಗೆ ಕೂಳು ಹೆಚ್ಚಾಗಿದೆ ಕೊಬ್ಬಿಕುಳಿತಿದ್ದಾನೆ ಕೊಬ್ಬಿ."

ನಾಯಕರ ಬೈಗಳು, ಪಶ್ಚಾತ್ತಾಪದ ಭರದಲ್ಲಿದ್ದ ಮಾದಪ್ಪನಿಗೆ ಹೆಚ್ಚಿನ ವ್ಯಥೆಯನ್ನು ಉಂಟುಮಾಡಲಿಕ್ಕೇನೂ ಸಮರ್ಥವಾಗಲಿಲ್ಲ. ದೈನ್ಯವೇ ಮೈಗೊಂಡು ನಿಂತಂತೆ ಮಾದಪ್ಪ ನಿಂತು ಬಿಟ್ಟಿದ್ದ. ಆತನ ಸ್ಥಿತಿಯನ್ನು ಕಂಡು ನಾಯಕರ ಹೆಂಡತಿಗೆ ಕರುಳನ್ನು ಕಿವುಚಿ ದಂತಾಗುತ್ತಿದ್ದಿತು.

ತಮ್ಮ ಮಾತಿಗೆ ಮಾದಪ್ಪ ಹೊರಟು ಹೋಗದುದನ್ನು ಕಂಡು

ನಾಯಕರು ಇನ್ನಿಷ್ಟು ರೇಗಿದರು. ತಮ್ಮ ಬಲದ ಕೈಯಿಂದ ಮಾದಪ್ಪನ ಎಡಗಿವಿಯನ್ನು ಗಟ್ಟಿಯಾಗಿ ಹಿಡಿದು, ದರದರನೆ ಎಳೆದುಕೊಂಡು ಹೋಗಿ, ತಲೆಬಾಗಿಲ ಹೊರಕ್ಕೆ ದಬ್ಬಿ "ಹೋಗು, ಕತ್ತೆಯಮಗನೇ! ನಿನಗೆ ಸಂಬಳ ಹೆಚ್ಚು ಬೇಕೆ? ಈಗ ದುಡಿದ ಸಂಬಳವನ್ನೇ ಕಾಣುವೆಯಂತೆ!" ಎಂದು ನುಡಿದರು. ಗಟ್ಟಿಯಾಗಿ ತಲೆಬಾಗಿಲನ್ನು ಮುಚ್ಚಿಕೊಂಡು ಒಳಕ್ಕೆ ಹೊರಟುಹೋದರು. ಮಾದಪ್ಪನು ಯಾವುದೇನೂ ತಿಳಿಯದವನಾಗಿ, ನಿಟ್ಟುಸಿರಮೇಲೆ ನಿಟ್ಟುಸಿರಬಿಡುತ್ತ, ಮೆಲ್ಲ ಮೆಲ್ಲಗೆ ಅಡಿಯಿಡುತ್ತ, ನಡುನಡುವೆ ಕಣ್ಣೀರು ಮಿಡಿಯುತ್ತ ತನ್ನ ಗುಡಿಸಿಲಿನ ದಾರಿಯನ್ನು ಹಿಡಿದ.

೭

ಮರುದಿನವೆ ಮೊದಲನೆಯ ತಾರೀಖು. ಹಗಲು ನಾಲ್ಕು ಗಂಟೆಯಾಗಿರಬಹುದು. ನಾಯಕರು ಎಂದೂ ಇಲ್ಲದ ಔದಾಸೀನ್ಯದ ಮುಖದಿಂದ ಕುರ್ಚಿಯ ಮೇಲೆ ಬಿದ್ದುಕೊಂಡಿದ್ದಾರೆ. ಬೆಳಗಿನಿಂದಲೂ ಇದು ವರೆಗಿನ ವೇಳೆಯನ್ನವರು ಆಲೋಚನೆಯಲ್ಲಿಯೆ ಕಳೆದಿದ್ದರು. ಈಗಲಾದರೂ ಯೋಚನೆಯಲ್ಲಿಯೇ ಮುಳುಗಿ ಹೋಗಿದ್ದರು. ಅವರ ಯೋಚನಾಲೋಕದಲ್ಲಿ ನಿಮಿಷ-ನಿಮಿಷಕ್ಕೂ ಮುಂದೆ ಬಂದು ನಿಲ್ಲುವವನೆಂದರೆ, ನಿನ್ನೆಯ ರಾತ್ರಿಯ-ಕರುಣಾಮೂರ್ತಿಯಾದ ಮಾದಪ್ಪ. ಆತನು ಒಮ್ಮೆ ತಪ್ಪುಗಾರನಾಗಿ ತೋರಿ, ನಾಯಕರ ರೋಷಕ್ಕೆ ಪಾತ್ರನಾಗುವನು. ಇನ್ನೊಮ್ಮೆ ತಪ್ಪಿಲ್ಲದವನಾಗಿ ತೋರಿ, ಅವರ ಮರುಕಕ್ಕೆ ಗುರಿಯಾಗುವನು. ನಾಯಕರು ಇದುವರೆಗೆ ತಮ್ಮ ಜೀವನದಲ್ಲಿ ಇಷ್ಟೊಂದು ಕಳವಳಕ್ಕೆ ಗುರಿಯಾದುದಿಲ್ಲ. ಇಂದು ಅವರ ಬುದ್ಧಿಮನಗಳೆರಡೂ ಕೂಡಿ, ಮಾದಪ್ಪನ ಬದುಕಿನ ಹೊತ್ತಿಗೆಯನ್ನು ವಿಮರ್ಶಿಸಿ, ಕಂಡ ರಹಸ್ಯವನ್ನು ಹೃದಯಕ್ಕೆ ತಿಳಿಸುತ್ತಿದ್ದುವು. ಕೇಳಿ ಕೇಳಿ ನಾಯಕರ ಹೃದಯವು ಮರುಗಿ ಕೊರಗು

ವುದು. ಬಿಸಿಯುಸಿರ ಮೂಲಕ ತನ್ನ ಭಾವವನ್ನು ಹೊರಕ್ಕೆ ಹಾಕು ವುದು.

ನಾಯಕರ ಮನೆಯಲ್ಲಿ ಒಬ್ಬ ವಿದ್ಯಾರ್ಥಿ ಉಂಡುಕೊಂಡು ಇದ್ದನಲ್ಲವೇ ? ಆತನ ಮೇಲೆ ಒಂದು ಕೆಲಸದ ಹೊಣೆಯೂ ಇದ್ದಿತು. ಮನೆಯ ತಿಂಗ–ತಿಂಗಳಿನ ಆಯವ್ಯಯದ ಲೆಕ್ಕವನ್ನಿಡುವುದು ಆತನ ಕೆಲಸ. ಇಂದು ಒಂದನೆಯ ತಾರೀಖಾದುದರಿಂದ, ಕಳೆದ ತಿಂಗಳ ಲೆಕ್ಕವನ್ನು ನಾಯಕರಿಗೆ ತೋರಿಸಬೇಕಾಗಿದ್ದಿತು. ಕೈಯಲ್ಲಿ ಲೆಕ್ಕದ ಪುಸ್ತಕವನ್ನು ಹಿಡಿದುಕೊಂಡು, ಅವರು ಕುಳಿತಲ್ಲಿಗೆ ಬಂದ; ಆ ತಿಂಗಳ ಲೆಕ್ಕವನ್ನು ಬರೆದ ಹಾಳೆಯನ್ನು ತೆರೆದಿಟ್ಟು, ನೋಡಬೇಕೆಂದು ಹೇಳಿದ. ಮನಸ್ಸಿಲ್ಲದವರಾಗಿ ನಾಯಕರು ಮೌನವಾಗಿಯೆ ಎಲ್ಲ ವನ್ನೂ ನೋಡಿದರು. ತಿಂಗಳಿನ ಒಟ್ಟು ವೆಚ್ಚವು ಮೂನ್ನೂರು ಐವತ್ತೈದು ರೂಪಾಯಿಯಾಗಿದ್ದಿತು. "ನಾಟಕ ಸಿನೇಮಾ" ಎಂಬ ಸದರಿನ ಕೆಳಗೇ ಅರುವತ್ತಾರು ರೂಪಾಯಿಗಳ ವೆಚ್ಚದ ಅಂಕಿ ಯಿದ್ದಿತು. ನಿಧಾನವಾಗಿ ನೋಡುವುದಾದ ಮೇಲೆ, ತಮ್ಮ ಯೋಚ ನೆಯ ಸ್ಥಿರದೃಷ್ಟಿಯನ್ನು ಮೇಲಕ್ಕೆ ಹೊರಳಿಸಿದರು. ಒಂದೆರಡು ನಿಮಿಷ ಹಾಗೆಯೇ ಕುಳಿತಿದ್ದರು. ಇದ್ದಕ್ಕಿದ್ದ ಹಾಗೆಯೆ ಮೈಯಲ್ಲಿ ಕೋಲುಮಿಂಚೊಂದು ಮಿಂಚಿ ಮರೆಯಾದಂತಾಯಿತು. ನಾಯಕರ ಹೃದಯವು ಜುಮ್ಮೆಂದಿತು. ತಮ್ಮಲ್ಲಿ ತಾವೇ ಎಂದು ಕೊಂಡರು. "ನಮ್ಮ ಮನೆಯಲ್ಲಿ ಗಂಡಹೆಂಡಿರು ನಾವಿಬ್ಬರೇ ! ತಿಂಗಳಿನ ವೆಚ್ಚ ಮೂನ್ನೂರು ಐವತ್ತೈದು ರೂಪಾಯಿ. ಮಾದಪ್ಪನ ಮನೆಯಲ್ಲಿ ಆರೇಳು ಜನರು; ಆತನ ಸಂಪಾದನೆ ಬರೀ ಒಂಬತ್ತು ರೂಪಾಯಿ."

ಇದುವರೆಗೆ ಅನುಭವಿಸದಿದ್ದ ಕಳವಳವನ್ನು ನಾಯಕರು ಈಗ ಅನುಭವಿಸುತಲಿದ್ದರು. ತುಂಬ ಕನಿಕರವು ಬೆರೆತಿದ್ದ ದನಿಯಲ್ಲಿ ಮುಂದೆ ನಿಂತಿದ್ದವನಿಗೆ ಹೇಳಿದರು.

" ಅನಂತಾ ! ನಾಳೆ ನೀನು ಬೆಳಗಿನಲ್ಲಿಯೆ ಮಾದಪ್ಪನ ಮನೆಗೆ ಹೋಗು ! ನಾನು ಕರೆದಿದ್ದೇನೆ—ಎಂದು ಹೇಳಿ, ಆತನನ್ನು ಕರೆದು ಕೊಂಡು ಬಾ ! ಬಿಟ್ಟು ಬರಬೇಡ. "



# ಬಹಿಷ್ಕಾರ

## ಮುನ್ನುಡಿ

ನಮ್ಮ ಶಾಮಣ್ಣ ತಮ್ಮೂರಿಗೆ ಬಂದುಹೋಗಬೇಕೆಂದು, ಕಾಗದದ ಮೇಲೆ ಕಾಗದ ಬರೆಯುತ್ತಿದ್ದ. ನಮ್ಮ ಸೋದರತ್ತೆ-ಶಾಮಣ್ಣನ ತಾಯಿ ಇದ್ದಾಗ, ಮೂರುನಾಲ್ಕುಸಲ ಅವರ ಊರಿಗೆ ಹೋಗಿದ್ದೆ. ಆಗ ನಾನು ಚಿಕ್ಕವ; ಶಾಮಣ್ಣನೂ ಚಿಕ್ಕವ. ಆಮೇಲಿನ ನನ್ನ ವಿದ್ಯಾರ್ಥಿಜೀವನದಲ್ಲಿ ಬೇರೆಕಡೆಗೆ ಎಲ್ಲಿಗೂ ಹೋಗಲಿಕ್ಕೆ ಆಗುತ್ತಿರಲಿಲ್ಲ. ನನಗೆ ದೊರೆಯುತ್ತಿದ್ದ ವಿದ್ಯಾರ್ಥಿವೇತನವನ್ನು ಕೊನೆಯವರೆಗೆ ಕಾಯ್ದುಕೊಳ್ಳಬೇಕೆಂದು ನನ್ನ ಹವಣಿಕೆ. ನನ್ನ ವಿದ್ಯಾಭ್ಯಾಸದ ಗಡಿಯಾರ ಹಾಗೆಯೇ ಸಾಗಿರುವುದಕ್ಕೆ ವಿದ್ಯಾರ್ಥಿವೇತನವೇ ಕೀಲಿಕೊಟ್ಟ 'ಸ್ಪ್ರಿಂಗು' ಇದ್ದಂತೆ. ಈ ಸ್ಪ್ರಿಂಗು ನಿಂತುಬಿಟ್ಟರೆ,ಗಡಿಯಾರವೂ ನಿಂತು ಹೋಗುತ್ತಿದ್ದಿತು. ಎಂತಲೇ ಆವಶ್ಯಕವಿಲ್ಲದಿದ್ದರೂ ಹೆಚ್ಚಾಗಿಪಾಠಗಳನ್ನು ಓದಿಕೊಳ್ಳುತ್ತಿದ್ದೆನು. ಹೈಸ್ಕೂಲು ಕಾಲೇಜುಗಳು ತೆರೆದಿದ್ದಾಗ ನನ್ನ ವಾಸ್ತವ ಧಾರವಾಡದಲ್ಲಿ. ಬಿಡುವಾದಾಗ ನಮ್ಮೂರಿನ ನನ್ನ ಕಿರುಮನೆಯಲ್ಲಿ. ಯಾವಾಗಲೂ ಮೂಗಿನ ಮುಂದೆ ಪುಸ್ತಕ. ನೈಸರ್ಗಿಕ ನಿತ್ಯಕರ್ಮಗಳನ್ನು ಮಾಡುವಾಗಷ್ಟು, ನಿರ್ವಾಹವಿಲ್ಲದೆ,ನನ್ನ ಕೈಗೆ ಪುಸ್ತಕದ ವಿಯೋಗವುಂಟಾಗುತ್ತಿದ್ದಿತು. "ನಮ್ಮ ಮಗನು ಎಷ್ಟೊಂದು ಓದುವನಲ್ಲ!" ಎಂದು ನಮ್ಮ ತಾಯಿತಂದೆಗಳು ಒಳಗೊಳಗೆಯೇ ಹಿರಿಹಿರಿ ಹಿಗ್ಗುತಿರಬಹುದು. ಇಂತಹ ಓದುವ ಮಗನು ಹುಟ್ಟಿದುದರಿಂದ ತಮ್ಮನ್ನು ತಾವೇ

ಧನ್ಯರೆಂದೂ ಭಾವಿಸಿಕೊಂಡಿರಬಹುದು. ನಮ್ಮ ತಂದೆ ದೇವರ ಪೂಜೆ ಮಾಡುವಾಗ, ತಾಯಿ ತುಳಸಿಗೆ ನೀರೆರೆಯುವಾಗ "ನಮ್ಮ ಮಗ ನಿಗೆ ಹೀಗೆಯೆ ಕೊನೆಯತನಕ ಓದುತಿರುವಂತೆ ಬುದ್ಧಿಕೊಡು ದೇವರೇ!" ಎಂದು ಬೇಡಿಕೊಳ್ಳುತ್ತಿರಬಹುದು. ಅಂತೂ ದೇವರು ಅವರ ಕೋರಿಕೆಯನ್ನು ಈಡೇರಿಸಿದ. ಪರೀಕ್ಷೆಯ ಕೊನೆಯದಿನದ ವರೆಗೂ ಪುಸ್ತಕವನ್ನು ಕೈಯಲ್ಲಿ ಹಿಡಿಸಿದ. ಈಗ ಪರೀಕ್ಷೆ ಪಾಸಾದ ಮೇಲೆ ಒಂದು ದಿನವೂ ಪುಸ್ತಕವನ್ನು ಕೈಯಲ್ಲಿ ಹಿಡಿದುದಿಲ್ಲ. ಪುಸ್ತಕ ಕಾಣದಷ್ಟು ಸೆಲ್ಫಿನ ಮೇಲೆಲ್ಲ ಹುಡಿಕುಳಿತು ಬಿಟ್ಟಿದೆ. ಅದನ್ನು ಕೊಡಹಿ ಸ್ವಚ್ಛಮಾಡಬೇಕೆಂಬ ವಿಚಾರ ಕೂಡ ಮೂಡಲೊಲ್ಲದಾಗಿದೆ. ಓದುವುದನ್ನು ಬಿಟ್ಟರೂ, ಬರೆಯುವುದನ್ನು ಬಿಡುವುದು ಮಾತ್ರ ನನ್ನ ದೈವದಲ್ಲಿ ಬರೆದಂತೆ ತೋರುವುದಿಲ್ಲ. ಕೆಲಸ ಸಂಪಾದಿಸುವುದಕ್ಕಾಗಿ ದಿನದಿನವೂ ಎರಡುಮೂರು ಸಂಸ್ಥೆಗಳಿಗೆ, ಮೂರುನಾಲ್ಕು ಸರ ಕಾರೀ ಆಫೀಸುಗಳಿಗೆ "ನಮ್ರಪೂರ್ವಕವಾದ ವಿನಂತಿ" ಯನ್ನು ಬರೆದುಕೊಳಬೇಕಾಗುತ್ತಿರುವುದು. ಇದುವರೆಗೆ ನನ್ನ ವಿನಂತಿಯನ್ನು ಕಿವಿಗೆ ಹತ್ತಿಸಿಕೊಂಡ ಮಹಾನುಭಾವರು ಯಾರೂ ದೊರೆತಿಲ್ಲ.

ಶಾಮಣ್ಣನ ಒತ್ತಾಯದ ಕಾಗದಗಳು ಆಗಾಗ ಬರಲು ತೊಡಗಿದುದರಿಂದ, ಮೊನ್ನೆಯ ದೀವಳಿಗೆಯಲ್ಲಿ ಅಯ್ಯನೂರಿಗೆ ಹೋಗಿದ್ದೆ. ಹತ್ತು ಹದಿನೈದು ದಿವಸಗಳವರೆಗೆ ಅಲ್ಲಿ ಇದ್ದೆ. ನಾನು ಚಿಕ್ಕತನದಲ್ಲಿ ನೋಡಿದ್ದ ಅಯ್ಯನೂರೇ ಅದು. ಈಗಿದ್ದ ಸೊಬಗನ್ನು ಆಗಲೂ ನೋಡಿ ಆನಂದಪಟ್ಟಿದ್ದೆ. ಆದರೆ ಆ ಸೊಬಗನ್ನೂ ಆನಂದ ವನ್ನೂ ವಿಮರ್ಶೆಮಾಡಿ ನೋಡುವಷ್ಟು ಬುದ್ಧಿಶಕ್ತಿ ಆಗ ಇರಲಿಲ್ಲ. ಈಗ ಬಂಡಿಬಂಡಿತುಂಬ ಹೊತ್ತಿಗೆಗಳನ್ನು ಓದಿ ಬೆಳೆಯಿಸಿಕೊಂಡಿ ದ್ದೇನೆ. ಪುಸ್ತಕವನ್ನೋದಿ ಬೆಳೆಯಿಸಿಕೊಂಡಿದ್ದೇನೋ, ಜಗತ್ತಿನ ಅನುಭವವು ಹೆಚ್ಚುಹೆಚ್ಚಾಗಿ ಆದಂತೆ ಆ ಶಕ್ತಿ ತಾನಾಗಿಯೆ ಬೆಳೆ

ಯಿತೋ ಎಂದು ಆಗಾಗ ಸಂಶಯವೊಂದು ಬರುತ್ತದೆ. ಈ ಸಂಶ ಯದ ಸಮಾಧಾನವು ಇನ್ನೂ ಸರಿಯಾಗಿ ಆಗಲೊಲ್ಲದಾಗಿದೆ.

ಅಯ್ಯನೂರು ಕೃಷ್ಣಾನದಿಯ ತೀರದಲ್ಲಿದೆ. ಊರು ದೊಡ್ಡದು. ಬ್ರಾಹ್ಮಣರ ವಸತಿಯೂ ಬೇಕಾದಷ್ಟು ಇದೆ. ನಾನು ಹೋದಾಗ ಶರತ್‌ಕಾಲ. ನದಿಯ ನೀರು ತೆಂಗಿನ ಎಳನೀರಂತೆ ತಿಳಿಯಾಗಿ ಹರಿ ಯುತ್ತಿರುವುದು. ಇಕ್ಕಡೆಗಳಲ್ಲಿಯೂ ಹಚ್ಚಹಸುರಿನಿಂದ ಕೂಡಿದ ಬಿಳಿಜೋಳದ ಹೊಲಗಳು. "ಮಾನವಪ್ರಾಣಿಯ ಆಹಾರವು ನಮ್ಮ ಸ್ವೈಯಲ್ಲಿ ಅಡಗಿದೆ'' ಎಂದು ಹೆಮ್ಮೆಯಿಂದ ಉಲಿದು ನಲಿಯುತಿರು ವಂತೆ,ಮೊಳದುದ್ದ-ಮೊಣಕಾಲುದ್ದದ ಜೋಳದ ಪಯಿರು,ಹೊಳೆಯ ಮೇಲಿಂದ ಹಾಯ್ದು ಬರುವ ತಂಗಾಳಿಗೆ ತೊನೆದಾಡುತಿರುವುದು. ಸಂಜೆಯ ಹೊಂಬಣ್ಣದ ಹೂಬಿಸಿಲು ಹೊಳೆಯ ತಿಳಿನೀರಿನ ತೆರೆಗಳ ಮೇಲೆ ನರ್ತಿಸುತಿರುವಾಗಲಂತೂ, ನೋಟಕರ ಕಣ್ಣು ತನಗಿದ್ದ ದೃಕ್-ಶಕ್ತಿ ಸಾಲದೆಂದು ವ್ಯಸನಪಡುತ್ತ ನಿಂತಲ್ಲಿ ನಿಂತುಬಿಡುತ್ತದೆ. ಹೊಳೆಯಲ್ಲಿ ಕೃಷ್ಣೆಯ ಕುಣಿತ, ದಂಡೆಯ ಹೊಲಗಳಲ್ಲಿ ಸಸ್ಯ-ಶ್ರೀಯ ಕುಣಿತ, ನದಿಯ ಮೇಲ್ಗಡೆಗೆ ಬೆಳುವಕ್ಕಿಗಳ ಮಾಲೆಯ ರೆಕ್ಕೆಗಳ ಕುಣಿತ; ಇದನ್ನೆಲ್ಲ ನೋಡುತ್ತ ನಿಂತುಬಿಟ್ಟರೆ, ನಮ್ಮ ಹೃದ ಯವೂ ಅದರೊಡನೆ ಕುಣಿಯತೊಡಗುವುದು. ಪ್ರಕೃತಿದೇವಿ ಪುರು-ಷೋತ್ತಮನ ಮನಸ್ಸನ್ನು ಮೆಚ್ಚಿಸಲು, ನರ್ತಕಿಯ ವೇಷವನ್ನು ತೊಟ್ಟು ನಾಟ್ಯವಾಡುತ್ತಿರುವಳೆಂದು ಮನಸ್ಸಿಗೆನಿಸುವುದು. ಹೊಳೆಯ ಮಡುಗಳಲ್ಲಿ ಕಾರ್ಮೋಡದ ತಂಡಗಳಂತಿರುವ ಆನೆಗಳ ಬಳಗ ನೀರಾಟವಾಡುತ್ತಿರುವುದು. ಈ ಕೃಷ್ಣಾತೀರದ ಊರಾನೆಗಳು, ಮಲೆ ನಾಡಿನ ಕಾಡಾನೆಯಂತಹವಲ್ಲ. ಮಲೆನಾಡಿನ ಆನೆಗಳಿಗೆ ಉದ್ದ ವಾದ ಸೊಂಡಿಲು. ಇವುಗಳಿಗೆ ಸೊಂಡಿಲಿಲ್ಲ. ಕಾಡಿನ ಆನೆಗಳಿಗೆ ಗಂಡಿಗಷ್ಟೇ ಮುಖದ ಮುಂಗಡೆಗೆ ಕೊಂಬುಗಳಾದರೆ, ಇವುಗಳಿಗೆ

ಗಂಡು ಹೆಣ್ಣುಗಳೆರಡಕ್ಕೂ ತಲೆಯ ಮೇಲೆ ಮಾರುದ್ದದ ಕೊಂಬು ಗಳು. ಅವುಗಳನ್ನು ಕಟ್ಟುವವರು ದೊರೆಗಳಷ್ಟೇ! ಇವುಗಳನ್ನು ಬಡವರೂ ಬಲ್ಲಿದರೂ ಸಾಕುವರು. "ಜೋಳದಾ ಬೋನಕ್ಕೆ ಬೇಳೆಯಾ ತೊಗೆಯಾಗಿ, ಕಾಳೆಮ್ಮೆ ಕರೆದ ಹಯನಾಗಿ, ಬೆಳುವಲದ ಮೇಳ ನೋಡು" ಎಂದು ಸರ್ವಜ್ಞ ಹೇಳಿದುದನ್ನು ಅನೇಕರು ಬಲ್ಲರು. ಕೃಷ್ಣಾತೀರದ ಆನೆಗಳೆಂದರೆ ಈ ಕಾಳೆಮ್ಮೆ ಕಾಳಕೋಣ ಗಳ ಒಳಗವೇ; ಅಲ್ಲಿಯ ಎಮ್ಮೆಯ ಗುಣವೋ, ಕೃಷ್ಣೆಯ ನೀರಿನ ಗುಣವೋ ಕಾಣೆ. ಒಂದೊಂದು ಎಮ್ಮೆ ಕೊಡಕೊಡ ಹಾಲು ಕರೆ ಯುವುದು. ಬಡವರ ಒಣರೊಟ್ಟಿಗೆ ಸಾಧನವನ್ನೊದಗಿಸಿ ಒಡಲನ್ನು ತಣಿವುಗೊಳಿಸುವುದು. ಆದರೆ ಒಂದು ತಮಾಷೆಯ ಸಂಗತಿ. ಆ ಎಮ್ಮೆಗಳ ಹಯನವುಣ್ಣುವ ಬಹಳ ಜನರ ಬುದ್ಧಿ, ಎಮ್ಮೆಯ ತಮ್ಮಂದಿರ ಬುದ್ಧಿಗೆ ಸಮಾನವಾಗಿ ನಿಲ್ಲುವುದು.

ನಾನು ಕಾಲೇಜಿನಲ್ಲಿದ್ದಾಗ ಕನ್ನಡಸಂಸ್ಕೃತಿಯ ಅಭಿಮಾನಿ ಗಳೊಬ್ಬರ ಉಪನ್ಯಾಸವನ್ನು ಕೇಳಿದ್ದೆ. "ನಮ್ಮ ನಾಡಿನ ಪ್ರತಿ ಯೊಂದು ಊರಿನ ಹೆಸರಿಗೂ ಒಂದೊಂದು ಐತಿಹ್ಯವಿರುವುದು. ಅಂತಹ ಐತಿಹ್ಯಗಳನ್ನು ಕಲೆಹಾಕುವುದು ಪ್ರತಿಯೊಬ್ಬ ಕಲಿತ ಕನ್ನಡಿ ಗನ ಆವಶ್ಯಕವಾದ ಕೆಲಸ" ಎಂದು ಹೇಳಿದ್ದರು. ಈ ಮಾತು ನನ್ನ ಮನಸ್ಸಿನಲ್ಲಿ ನೆಲೆಮಾಡಿದ್ದಿತು. ಅಯ್ಯನೂರಿಗೆ ಹೋದೊಡನೆ ಆ ಊರ ಹೆಸರಿನ ಐತಿಹ್ಯವನ್ನು ಕುರಿತು, ಬೇರೆ ಬೇರೆಯವರ ಬಳಿಯಲ್ಲಿ ಚರ್ಚಿಸತೊಡಗಿದೆನು. ನಮ್ಮ ಶಾಮಣ್ಣನನ್ನು ಕೇಳಿದರೆ "ನನ ಗೇನೂ ಅದು ಗೊತ್ತಿಲ್ಲವಪ್ಪಾ," ಎಂದು ನುಡಿದು ಬಿಟ್ಟ. ಅಯ್ಯ ನೂರಿಗೆ ಅಕ್ಕಪಕ್ಕದಲ್ಲಿದ್ದ ಹಳ್ಳಿಯವರು – ಅದೇಕೆ ಅಯ್ಯನೂರಲ್ಲಿಯ ಅಶಿಕ್ಷಿತರು ಕೂಡ– ಆ ಊರನ್ನು 'ಐನೂರು' ಎಂದು ಹೇಳುತ್ತಿದ್ದರು. ಈ ಎರಡು ಹೆಸರುಗಳಲ್ಲಿ, ಯಾವುದೇ ಒಂದನ್ನಾದರೂ ಅರ್ಥಮಾಡಿ

ಹೇಳುವಂತಹ ಐತಿಹಾಸಿಕ ಕುರುಹುಗಳೇನಾದರೂ ಸಿಕ್ಕಬಹು ದೆಂದು, ಊರು ಸುತ್ತಿ ಸುತ್ತಿ ಹುಡುಕಿದೆ. ಮೊದಮೊದಲು ಶಾಮಣ್ಣ ಉತ್ಸಾಹದಿಂದ ನನ್ನೊಡನೆ ತಿರುಗುತ್ತಿದ್ದ. ಆಮೇಲೆ "ಬಿಡಪ್ಪಾ! ಇದೆಲ್ಲ ಏತಕ್ಕೆ ಬೇಕಾಗಿದೆ? ನಾಲ್ಕುದಿವಸ ಬಂದಿದ್ದೀಯೆ. ಹಾಯಾಗಿ ಇದ್ದು ಹೋಗಬಾರದೆ?" ಎಂದು ಬೇಸರದ ದನಿಯಲ್ಲಿ ಹೇಳ ತೊಡಗಿದ.

ನಾನು ಹೋದ ನಾಲ್ಕೈದು ದಿನಗಳಲ್ಲಿಯೆ, ಬಹಳ ಮುಪ್ಪಿನ ವರಾದ ಆಚಾರ್ಯರೊಬ್ಬರು ನೋಡಲಿಕ್ಕೆ ಸಿಕ್ಕರು. ಆ ಊರ ಹೆಸರಿನ ಐತಿಹ್ಯ, ಅವರಿಗೇನಾದರೂ ಗೊತ್ತಿರಬಹುದೆಂದು ಮನಸ್ಸಿಗೆ ನಿಸಿತು. ಕೂಡಲೆ ಮಾತು ತೆಗೆದೆ. ಕೇಳಿದುದೇ ತಡ; ಆಚಾರ್ಯರು ಗಂಭೀರಭಾವದಿಂದ ತಮ್ಮೂರ ಹೆಸರಿನ ವ್ಯುತ್ಪತ್ತಿಯ ಕತೆಯನ್ನು ಹೇಳಲು ತೊಡಗಿದರು.

"ನೋಡಪ್ಪಾ, ಈ ಊರು ಮೊದಲು ಬಲು ಚಿಕ್ಕದು. ನಮ್ಮ ಬ್ರಾಹ್ಮಣರ ಮನೆಗಳು ಯಾವುವೂ ಇಲ್ಲಿ ಇರಲಿಲ್ಲ. ಬರೀ ಕುರುಬರ ಮನೆಗಳಿಂದಲೆ ಹಳ್ಳಿ ತುಂಬಿದ್ದಿತು. ಒಬ್ಬನೇ ಒಬ್ಬ—ಮಠದ ಅಯ್ಯ ಈ ಊರಲ್ಲಿ ಇರುತ್ತಿದ್ದನಂತೆ. ಆತನಿಗೆ ಕನ್ನಡ ಜೈಮಿನಿಭಾರತದ ಹತ್ತೆಂಟು ಪದ್ಯಗಳು ಬಾಯಿಪಾಠ ಬರುತ್ತಿದ್ದವಂತೆ. ಅಯ್ಯನು ತನಗೆ ಬಂದ ಪದ್ಯಗಳನ್ನು, ತಮ್ಮೂರ ಕುರುಬರ ಮುಂದೆ ಹೇಳಿ ಹೇಳಿ, ತಪ್ಪೋ ಒಪ್ಪೋ—ತನ್ನ ಮನಸ್ಸಿಗೆ ಬಂದಂತೆ ಅರ್ಥಮಾಡಿ ಹೇಳು ವನು. ಕುರುಬರಿಗೆ ಇದರಿಂದ ತುಂಬ ಆಶ್ಚರ್ಯ. ತಮ್ಮ ಅಯ್ಯ ನವರು ವಿಪರೀತ ಜಾಣರೆಂದು ಅವರ ಭಾವನೆ. ಅವರೆಲ್ಲರು ಅಯ್ಯನವ ರನ್ನು "ಪಂಡಿತರೇ!" ಎಂದು ಹೆಸರಿಟ್ಟು ಕೂಗುತ್ತಿದ್ದರಂತೆ. ಒಂದು ದಿವಸ ಒಬ್ಬ ವಿದ್ವಾಂಸನಾದ ಬ್ರಾಹ್ಮಣ—ಕಾಶಿಯಲ್ಲಿದ್ದು ಹನ್ನೆರಡು ವರ್ಷ ಅಧ್ಯಯನ ಮಾಡಿದವ—ಈ ಊರ ಬಳಿಯಿಂದ

ಹಾಯ್ದು ಹೋಗುತ್ತಿದ್ದನಂತೆ. ಕುರುಬರೆಲ್ಲ ಕೂಡಿ "ನೀವು ಯಾರು ? ಎಲ್ಲಿಗೆ ಹೋಗುತ್ತೀರಿ ?" ಎಂದು ಕೇಳಿದರಂತೆ. ಆಗ ಆ ಬ್ರಾಹ್ಮಣ "ನಾನು ಕಾಶಿಯಿಂದ ಬಂದ ಪಂಡಿತ. ಇತ್ತ ಕಡೆಗೆ ಇದ್ದ ಪಂಡಿತರ ಕೂಡ ವಾದ ಮಾಡಲಿಕ್ಕೆ ಹೊರಟಿದ್ದೇನೆ" ಎಂದು ಹೇಳಿದನಂತೆ. ಕುರುಬರು ಏನುಮಾಡಿದರೆಂದಿರಿ! "ನಮ್ಮಲ್ಲಿಯೂ ಒಬ್ಬರು ಪಂಡಿತರಿದ್ದಾರೆ; ಅವರಿಗೆ ನಿಮಗೆ ಆಗಲಿ ನೋಡೋಣ" ಎಂದು ಹೇಳಿ, ಆ ಬ್ರಾಹ್ಮಣನನ್ನು ಊರ ಚಾವಡಿಯಲ್ಲಿ ಕೂರಿಸಿದರಂತೆ. ತಮ್ಮ ಅಯ್ಯನವರನ್ನು ಕರೆದುಕೊಂಡು ಬಂದು "ನೀವೂ ಪಂಡಿತರು, ಇವರೂ ಪಂಡಿತರು; ಇಬ್ಬರಿಗೂ ವಾದವಾಗಲಿ ನೋಡೋಣ!" ಎಂದು ಹೇಳಿದರಂತೆ. ಅಯ್ಯನವರೂ ಆಸನ ಹಾಕಿ, ಗಂಭೀರಭಾವದಿಂದ ಬ್ರಾಹ್ಮಣನೆದುರು ಕುಳಿತರು. ವಾದಕ್ಕೆ ಆರಂಭವಾಯಿತು. ಕಾಶಿಯ ಪಂಡಿತರು ತಮ್ಮ ಅಸ್ಖಲಿತವಾದ ಸಂಸ್ಕೃತ ಭಾಷೆಯಲ್ಲಿ, ಯಾವುದೋ ಒಂದು ವಿಚಾರವನ್ನು ಪೂರ್ವಪಕ್ಷವಾಗಿ ಮಂಡಿಸಿ, ಕೊನೆಗೆ 'ಕಿಂಕಿಮಿದಂ' ಎಂದು ಕೇಳಿದರಂತೆ. ಕೂಡಲೆ ಅಯ್ಯನವರು ಎದ್ದು ನಿಂತು, ಹೊತ್ತಿದ್ದ ಸೆಲ್ಲೆಯನ್ನು ಸೊಂಟಕ್ಕೆ ಸುತ್ತಿ, ಚಪ್ಪಳಿಯಿಕ್ಕುತ್ತ, "ಕಿಂಕಿಮಿದದ್ದಂ—ಕಿಕ್ಕಿಮಿದದ್ದಂ" ಎಂದು ಮೇಲೆ ಮೇಲೆ ಹೇಳುತ್ತ, ಕುಣಿಯತೊಡಗಿದರಂತೆ. ಇದನ್ನು ನೋಡಿದ ಬ್ರಾಹ್ಮಣಪಂಡಿತ ಹೌಹಾರಿ ಕುಳಿತ. ಮುಂದೆ ಮಾತನ್ನೇ ಆಡಲಿಲ್ಲ. ಕುರುಬರು ತಮ್ಮ ಪಂಡಿತನ ಕುಣಿತವನ್ನು ಕಂಡರು. "ನಮ್ಮ ಅಯ್ಯನವರು ಗೆದ್ದರು" ಎಂದು ಉಬ್ಬಿ ಹಾರಾಡಿ, ಹೇರೆತ್ತನ್ನು ತಂದು, ಸಬರ ಹಾಕಿ, ಮೇಲೆ ಅಯ್ಯನವರನ್ನು ಕೂರಿಸಿ, ಡೊಳ್ಳು ಬಾರಿಸುತ್ತ ಊರಲ್ಲೆಲ್ಲ ಮೆರೆವಣಿಗೆ ತೆಗೆದರಂತೆ. ಬಳಿಕ "ಅಯ್ಯನವರೇ ನಿಮ್ಮಿಂದ ನಮ್ಮೂರಿನ ಮಾನವುಳಿಯಿತು. ಇಂದಿನಿಂದ ನಮ್ಮ ಊರನ್ನು ನಿಮ್ಮ ಹೆಸರಿನಿಂದ ಕರೆಯುವೆವು" ಎಂದು ನುಡಿದು "ಅಯ್ಯನೂರು" ಎಂದು ಈ ಊರಿಗೆ ಹೆಸರನ್ನಿಟ್ಟರಂತೆ. ಇದೇ ನೋಡಪ್ಪಾ ಈ ಊರ ಹೆಸರಿನ ಕತೆ"

ಈ ಕತೆಯನ್ನು ಕೇಳಿ ನಗೆ ಬಂದಿತು. ತುಂಬ ನಕ್ಕು ಬಿಟ್ಟೆ. 'ಏನೇ ಆಗಲಿ, ಇಷ್ಟೊಂದು ಪ್ರಯತ್ನ ಮಾಡಿದುದಕ್ಕೆ ಕೊಂಚ ವಾದರೂ ಫಲವು ದೊರೆಯಿತಲ್ಲ!' ಎಂದು ಸಮಾಧಾನ ತಳೆದೆ. ಆದರೆ 'ಕಾಶಿಯ ಪಂಡಿತರು ಕುರುಬರ ಮಾತು ಕೇಳಿ, ವಾದ ಮಾಡಲಿಕ್ಕೆ ಸಿದ್ಧರಾದುದು ತುಂಬ ಅಸಂಭವನೀಯ' ಎಂಬ ಯೋಚನೆ ಆಗಲೆ ಮನಸ್ಸಿನಲ್ಲಿ ಬಂದಿತು. ಇನ್ನೂ ಏನಾದರೂ ಇತಿಹಾಸ ದೊರೆಯ ಬಹುದೆಂದು, ಕಂಡವರನ್ನೆಲ್ಲ ಇದರ ವಿಷಯವಾಗಿ ಕೇಳುತ್ತಿದ್ದೆ.

ಆ ಊರ ಗೌಡರು ಕ್ಷತ್ರಿಯರು. ಗೌಡರ ಮನೆಯಲ್ಲಿ ತಮಾ ಷೆಯ ಮುದುಕನೊಬ್ಬನಿದ್ದಾನೆ. ಆತನಿಗೆ ವಯಸ್ಸು ಬಹಳವಾದರ ಎಪ್ಪತ್ತು ವರ್ಷ ಆಗಿರಬಹುದು. ಆದರೆ ಆತನು ಸರಗುಂದದ ಬಂಡಾಯ ದಲ್ಲಿ ತಾನೂ ಯುದ್ಧಕ್ಕೆ ಹೋಗಿದ್ದೆನೆಂದು, ಬಲು ಹೆಮ್ಮೆಯಿಂದ ಹೇಳುತ್ತಿರುತ್ತಾನೆ. ಆ ಮುದುಕ ಸರಗುಂದ ಬಂಡಾಯದ ಕತೆ ಯನ್ನು ಹೇಳತೊಡಗಿದನೆಂದರೆ,ಅದರಲ್ಲಿ ವಿಜಯನಗರದ ರಾಮರಾಜ, ಮೈಸೂರ ರಣಧೀರಕಂಠೀರವ,ಅಕಬರ್‌ಬಾದಶಹ,ಟಿಪ್ಪೂಸುಲ್ತಾನ್, ಶಿವಾಜಿ, ವಿಕ್ಟೋರಿಯಾಮಹಾರಾಣಿ, ಇವರೆಲ್ಲರು ಒಂದೇ ಕಾಲದಲ್ಲಿ ಬಂದುಬಿಡುವರು. ಒಬ್ಬೊಬ್ಬರ ಸಾಹಸವನ್ನೂ ಯುದ್ಧ ಕೌಶಲವನ್ನೂ ಹುರುಪಿನಿಂದ ಬಣ್ಣಿಸುತಿರುವಾಗ, ಆ ಮುದುಕನ ಕೆಂಗಣ್ಣು ಅರಳುವವು; ನರೆತ ಕಲ್ಲಿಯಮೀಸೆ ಕುಣಿಯತೊಡಗುವವು. ಹುರುಪಿನಭರದಲ್ಲಿ ಮುಪ್ಪಿನ ಅವಯವಗಳು ಅದುರುತಿರುವವು. ಊರ ಹೆಸರಿನ ಚರಿತ್ರೆಯ ಬಗೆಗೆ ನಾನು ಆತನೊಡನೆಯೂ ಮಾತ ನಾಡಿದೆ. "ಏನು ರಾಯರೇ! ಈ ಮಾತು ನಿಮಗೆ ಗೊತ್ತಿಲ್ಲವೇ? ಶಿವಾಜಿಗೂ ಹೈದರಲ್ಲಿಗೂ ಕಾಳಗ ನಡೆದಿತ್ತು. ಆ ಕಾಳಗದಲ್ಲಿ ನಮ್ಮೂರಿನ ಏನೂರುಜನ ಬಂಟರು ಶಿವಾಜಿಯ ಕಡೆಗೆ ಇದ್ದರು. ಅವರು ತಮ್ಮ ಬಿಚ್ಚುಗತ್ತಿಗಳನ್ನು ತಿರುವುತ್ತ, ಹೈದರಲ್ಲಿಯ ದಂಡ

ನ್ನೆಲ್ಲ ನುಚ್ಚುನುರಿ ಮಾಡಿದರು. ಶಿವಾಜೀ ನೋಡಿದ; ಆ ಐನೂರು ಜನರನ್ನೂ 'ಭಲೆ' ಎಂದು ಬೆನ್ನು ತಟ್ಟಿದ. ಆ ಐನೂರು ಜನರ ನೆನಪಿಗಾಗಿ ಈ ಊರನ್ನು ಕಟ್ಟಿಸಿ "ಐನೂರು" ಎಂದು ಹೆಸರಿಟ್ಟ. ಶಿವಾಜಿಯಿಟ್ಟ ಹೆಸರಿದು" ಎಂದು ಮುದುಕ ಹೇಳಿದ.

"ಶಿವಾಜಿ ಈ ಊರನ್ನು ಕಟ್ಟಿಸುವುದಕ್ಕೆ ಮೊದಲೇ ಇಲ್ಲಿ ಊರು ಇದ್ದಿತಲ್ಲವೇ ? ಐನೂರು ಜನ ಬಂಟರು ಇಲ್ಲಿಂದಲೇ ಹೋಗಿ ಆತನ ದಂಡಿನಲ್ಲಿ ಇದ್ದರಲ್ಲವೇ ?" ಎಂದು ನಾನು ಕೇಳಿದೆ. ಮುದುಕ ನಾನು ಕೇಳಿದ ಮಾತಿಗೆ ಉತ್ತರವನ್ನು ಕೊಡದೆ, ಕಿತ್ತೂರ ಚೆನ್ನಮ್ಮನ ಕತೆಗೆ ಮೊದಲು ಮಾಡಿದ.

ದಿನಕರ ಶಾಸ್ತ್ರಿಗಳು ಅಯ್ಯನೂರಿನಲ್ಲಿ ಪ್ರಸಿದ್ಧ ಜ್ಯೋತಿಷಿಗಳು. ಅವರನ್ನೂ ನಾನು ಒಂದು ಸಲ ಕಂಡೆ. ಅವರೊಡನೆ ಮಾತನಾಡುತಿರುವಾಗ ತಮ್ಮೂರ ಹೆಸರಿನ ಹುಟ್ಟನ್ನು ಹೀಗೆ ಹೇಳಿದರು.

"ಕೃಷ್ಣಾನದೀಮಹಾತ್ಮ್ಯ—ಎಂಬ ಸಂಸ್ಕೃತ ಗ್ರಂಥದಲ್ಲಿ ನಮ್ಮೂರ ಹೆಸರು ಬಂದಿದೆ. ಅದರಲ್ಲಿ 'ಅಯನಪುರಿ' ಎಂಬ ಹೆಸರಿನಿಂದ ನಮ್ಮೂರನ್ನು ಕರೆಯಲಾಗಿದೆ. ಜ್ಯೋತಿಷ ಶಾಸ್ತ್ರದಲ್ಲಿ ಬರುವ ಅಯನವೃತ್ತಕ್ಕೂ ಈ ಊರಿಗೂ ಏನೋ ಸಂಬಂಧವಿದ್ದಂತೆ ಕಾಣುತ್ತದೆ. ಬಲುದಿನದಿಂದ ನಾನೂ ಎಣಿಕೆ ಹಾಕುತ್ತಲಿದ್ದೇನೆ. ಇದುವರೆಗೆ ಯಾವುದೂ ಬಗೆಗೆ ಹರಿಯಲೊಲ್ಲದು"

ಹೀಗೆಯೆ ಹುಡುಕುತ್ತ ಹೋದರೆ, ಕುಲಕ್ಕೊಂದು ಕತೆಯಂತೆ ನೂರಾರು ಕತೆಗಳು ಸಿಕ್ಕಬಹುದೆಂದೆಣಿಸಿ, ಬೇಸತ್ತು ಐನೂರಿನ ಇತಿಹಾಸ ಸಂಶೋಧನೆಯ ಕೆಲಸವನ್ನು ಅಷ್ಟಕ್ಕೇ ಬಿಟ್ಟುಬಿಟ್ಟೆ.

ನಾನು ಹೇಳಬೇಕಾಗಿದ್ದ ಮುಖ್ಯ ಸಂಗತಿಯನ್ನು ಹೇಳದೆ ಇದುವರೆಗೆ ಏನೇನೋ ಮೂರು ಮಾರಿನ ಮುನ್ನುಡಿಯನ್ನು ಬೆಳೆಯಿಸಿದೆ. 'ಮೂಗಿಗಿಂತ ಮೂಗುತಿ ಭಾರ' ಎಂಬ ಮಾತಿನಂತೆ ಹೇಳ

ಬೇಕಾಗಿದ್ದ ಸಂಗತಿಗಿಂತ, ಅಯ್ಯನೂರಿನ ಇತಿಹಾಸ ಸಂಶೋಧನೆಯ ಇತಿಹಾಸವೇ ಹನುಮಂತನ ಬಾಲವಾಗಿ ಬಿಟ್ಟಿತು; ಕ್ಷಮಿಸಿ.

## ಮುಖ್ಯ ಸಂಗತಿ

ರವಿವಾರ; ಅಂದು ಅಯ್ಯನೂರಲ್ಲಿ ಸಂತೆ ನೆರೆಯುವುದು. ಮಧ್ಯಾಹ್ನದ ಊಟಮಾಡಿ ವಾಮಕುಕ್ಷಿಯನ್ನು ಮುಗಿಸಿ, ನಾನು-ಶಾಮಣ್ಣ ಮಾತನಾಡುತ್ತ ಕುಳಿತಿದ್ದೆವು. ಆಧುನಿಕ ಕನ್ನಡ ಕಥಾಸಾಹಿತ್ಯದ ವಿಚಾರದಲ್ಲಿ ಮಾತು ಹೊರಟಿತು. ಸರಿ! ಮೈಸೂರ ಕಡೆಯ ಕತೆಗಾರರು, ಉತ್ತರಕರ್ಣಾಟಕದ ಕತೆಗಾರರು, ಎಲ್ಲರೂ ಒಬ್ಬರ ಹಿಂದೆ ಒಬ್ಬರು ನಮ್ಮ ಮಾತಿನಲ್ಲಿ ಬಂದುಹೋದರು. ಇತ್ತೀಚೆಗೆ ನಾನು ಓದುವುದನ್ನು ಬಿಟ್ಟಿರುವೆನಾದರೂ, ನನಗೆ ಗೊತ್ತಿಲ್ಲದ ಲೇಖಕರ ಮೇಲೆಯೂ- ಏನೇನೋ ಕೆಲವು ಕೇಳಿಕೆಯ ಮಾತುಗಳ ಮೇಲಿಂದ ಅಭಿಪ್ರಾಯ ಕೊಡುತ್ತಿದ್ದೆನು. ಅಂದು ನಮ್ಮಿಂದ ಹೊಗಳಿಸಿಕೊಂಡ ಕತೆಗಾರರೂ ಬೈಗಳನ್ನು ತಿಂದರು; ತೆಗಳಿಸಿಕೊಂಡವರು ತಿಂದುದರಲ್ಲಿ ವಿಶೇಷವೇನೂ ಇಲ್ಲ.

ಎರಡು ಗಂಟೆಯಾಗಿರಬಹುದು. ನಮ್ಮ ಮಾತು ಅವಿಚ್ಛಿನ್ನವಾಗಿ ಸಾಗಿದ್ದಿತು. ಇದ್ದಕ್ಕಿದ್ದ ಹಾಗೆಯೆ ಒಬ್ಬ ಮನುಷ್ಯ ತಲೆ ಬಾಗಿಲನ್ನು ಪ್ರವೇಶಿಸಿ, ಒಳಕ್ಕೆ ಬರಲು ತೊಡಗಿದ. ಸಂತೆಯನ್ನು ಮಾಡಿಕೊಂಡು ಬಂದಿದ್ದನೇನೋ! ಹೆಗಲ ಮೇಲೆ ಏನೇನೊ ಪದಾರ್ಥಗಳನ್ನು ಒಳಗೊಂಡ ಹಸುಬೆಯಿದ್ದಿತು. ಅದರ ಭಾರಕ್ಕೆ ಆತ ಅತ್ತಿತ್ತ ಒಲೆದಾಡುತ್ತ ಹೆಜ್ಜೆಯಿಡುತ್ತಿದ್ದನು. ಬಲಗಣ್ಣ ಕರಿಯ ಗುಡ್ಡೆಯ ಮೇಲೆ, ಅವರೆ ಕಾಳಿನಷ್ಟು ಗುಳ್ಳೆ. ಮೈಬಣ್ಣ ತಿಳಿಗಪ್ಪು; ಉಟ್ಟುದು ಐದು ಮೊಳದ ಒಂದು ಮಡಿಪಂಜೆ; ತೊಟ್ಟುದು ಕಸೆ ಕಟ್ಟುವ ಬಗಲಬಂಡಿ; ತಲೆಗೆ ಕಂದು ಬಣ್ಣದ ಒಂದು ಹಳೆಯ ರುಮಾಲು; ಕೊರಳಿನಲ್ಲಿ ಕಡಲೆಯ ಕಾಳಿನ ಗಾತ್ರದ ರುದ್ರಾಕ್ಷಿಯ

ಒಂಟಿಳೆಯ ಸರ; ಹಣೆಯಲ್ಲಿ ಎರಡು ಬೆರಳಿನಿಂದ ಗೀರಿದ ಅಡ್ಡ ಗಂಧ. ಕಾಲೊಳಗಿನ ಹರಕು ಕೆಪುವನ್ನು ತುದಿಗಟ್ಟಿಯ ಬಳಿ ಬಿಡುತ್ತಿರು ವಾಗಲೆ ಶಾಮಣ್ಣ ಅವನನ್ನು ನೋಡಿದ.

"ಏನು ಶ್ರೀಕಂಠ ಭಟ್ಟರೇ ! ಸಂತೆಗೆ ಬಂದಿದ್ದಿರೇನು ? ಇಷ್ಟರ ಲ್ಲಿಯೆ ಸಂತೆ ಮುಗಿಯಿತೇ ? ಬನ್ನಿ ! ಮೇಲಕ್ಕೆ ಬನ್ನಿ "

ಎಂದು ಸಲುಗೆಯ ಆದರದಿಂದ ಬಂದವರನ್ನು ಬರಮಾಡಿ ಕೊಂಡ. ಭಟ್ಟರೂ ಪರಿಚಯದ ಕಿರುನಗೆ ನಗುತ್ತ, ಮೇಲಕ್ಕೆ ಬಂದು ಹೆಗಲ ಹೊರೆಯನ್ನು ಕೆಳಕ್ಕಿಳುಹಿ, ತಲೆಯ ರುಮಾಲನ್ನು ಗೂಟಕ್ಕೆ ಸಿಕ್ಕಿಸಿ, ಅಲ್ಲಿಯೆ ಇಟ್ಟಿದ್ದ ದಿಂಬಿಗೆ ಒರಗಿ ಕುಳಿತುಕೊಂಡರು.

"ಏನಪ್ಪಾ ! ಶಾಮಣ್ಣಾ ! ನೋಡಿದರೆ ಚಳಿಗಾಲ; ಬಿಸಿಲೋ ಬೇಸಗೆಯ ಬೇಗೆಯನ್ನು ಮೀರಿಸುವಂತಿದೆ ನೋಡು !" ಭಟ್ಟರು ಬಳಲಿದ ದನಿಯಲ್ಲಿ ನುಡಿದರು.

"ದಿನಮಾನವೆಲ್ಲಾ ಬದಲಾಗಿ ಹೋಗಿದೆ ಭಟ್ಟರೇ ! ಈಗ ಎಲ್ಲಾ ತಿರುವುಮುರುವು. ಮಳೆಗಾಲದಲ್ಲಿ ಚಳಿಗಾಲ; ಚಳಿಗಾಲದಲ್ಲಿ ಬೇಸಗೆಕಾಲ. ಇರಲಿ, ನೀರು ಬೇಕೇನು ನಿಮಗೆ ?"

"ಹೌದಪ್ಪಾ, ಸ್ವಲ್ಪ ತಣ್ಣಗಿನ ನೀರು ತರಬಾರದೇ ?"

ಶಾಮಣ್ಣ ಎದ್ದು ಒಳಕ್ಕೆ ನಡೆದ. ಭಟ್ಟರ ವೇಷ–ಭೂಷಣ ನೋಡಿ, ನನ್ನ ಮುಖವು ತಾನಾಗಿಯೆ ಮುದುಡಿಕೊಂಡಿತು. ಹಳ್ಳಿ ಗನ ಕೂಡ ಮಾತೇನೆಂದು ನಾನು ಗಾಂಭೀರ್ಯದ ಮೌನವನ್ನು ತಾಳಿ ಕುಳಿತಿದ್ದೆ. ಆದರೂ ಕಣ್ಣು ತಪ್ಪಿಸಿ ತಪ್ಪಿಸಿ, ಭಟ್ಟರ ಕಡೆಗೆ ನೋಡುತ್ತಿದ್ದೆ. ಭಟ್ಟರು ತಮ್ಮ ಒಕ್ಕಣ್ಣಿನ ಗುರುತಿಲ್ಲದ ನೋಟ ದಿಂದ, ಎವೆಯಿಕ್ಕದೆ ನನ್ನನ್ನು ನೋಡುತ್ತಿದ್ದರು. ಒಬ್ಬರೊಬ್ಬರ ಪರಿ ಚಯಕ್ಕಾಗಿ ಇಬ್ಬರ ಮನಸ್ಸೂ ಹಾತೊರೆಯುತ್ತಿದ್ದಿತು. ಆದರೆ ಏನೋ ಒಂದು ಬಗೆಯ ಉಪೇಕ್ಷೆಯಿಂದ ನಾನು ಭಟ್ಟರನ್ನು ಮಾತ

ನಾಡಿಸಲಿಲ್ಲ. ನನ್ನ ಸುಶಿಕ್ಷಣದ ಠೀವಿಯನ್ನು ಕಂಡೋ ಏನೋ, ಭಟ್ಟರು ನನ್ನನ್ನು ಮಾತನಾಡಿಸಲಿಲ್ಲ.

ದೀವಳಿಗೆಗಾಗಿ ಮಾಡಿದ್ದ ತಿಂಡಿಗಳಿಂದ ತುಂಬಿದ ತಟ್ಟೆಯನ್ನು ಎಡಗೈಯ್ಯಲ್ಲಿ, ನೀರಿನ ಪಾತ್ರೆಯನ್ನು ಬಲಗೈಯಲ್ಲಿ ಹಿಡಿದುಕೊಂಡು ಶಾಮಣ್ಣ ಮರಳಿ ಬಂದ. ಭಟ್ಟರ ಮುಂದೆ ಇಟ್ಟು 'ತೆಗೆದುಕೊಳ್ಳಿ' ಎಂದು ಹೇಳಿದ. 'ಇದೆಲ್ಲಾ ಯಾತಕಪ್ಪಾ ; ಬರೀ ನೀರು ತಂದಿದ್ದರೆ ಆಗುತ್ತಿದ್ದಿಲ್ಲವೇ?' ಎಂದು ನುಡಿಯುತ್ತಲೆ ಭಟ್ಟರು ಎದ್ದು, ಕೈಕಾಲು ತೊಳೆದುಕೊಂಡರು. ಬಳಿಕ ತಿಂಡಿಯನ್ನು ಬಾಯಾಡಿಸತೊಡಗಿದರು.

"ನಮ್ಮ ಸೋದರಮಾವನ ಮಗ ಇವರು ಭಟ್ಟರೇ!" ಶಾಮಣ್ಣ ಭಟ್ಟರಿಗೆ ನನ್ನ ಪರಿಚಯ ಮಾಡಿಕೊಟ್ಟ.

"ಏನು? ಶ್ರೀನಿವಾಸರಾಯರ ಚಿರಂಜೀವರೇ ಇವರು? ನಮಸ್ಕಾರ ಸ್ವಾಮೀ! ತಮ್ಮದು ಹೊಸ ಪರಿಚಯ. ಬಹಳ ಸಂತೋಷ." ಭಟ್ಟರು ತಿನ್ನುತ್ತಿರುವಾಗಲೆ ಮಾತನಾಡಿದರು.

ನಾನು ಏನೋ ಒಂದು ಬಗೆಯ ನಗೆಯನ್ನು ಎಳೆದು ತಂದು ಕೊಂಡೆ. ಸುಮ್ಮನೆ ಕುಳಿತಿದ್ದೆ.

ಶಾಮಣ್ಣ ನನಗೆ ಹೇಳಿದ. "ಈ ಭಟ್ಟರದು ಮೊದಲಿನಿಂದಲೂ ನಮ್ಮಲ್ಲಿ ಸಲುಗೆ ಹೆಚ್ಚು. ಇವರ ತಂದೆಯದು ನಮ್ಮ ತಂದೆಯದು ಬಲು ಸ್ನೇಹ. ಇಬ್ಬರಿಗೂ ಚದುರಂಗದಾಟದ ವ್ಯಸನ. ಇವರ ತಂದೆ ಈ ಊರಿಗೆ ಬಂದರೆ, ಎಂಟೆಂಟು ದಿವಸಗಳಾದರೂ ನಮ್ಮ ತಂದೆ ಅವರನ್ನು ಹೋಗಲು ಬಿಡುತ್ತಿರಲಿಲ್ಲ"

"ಹೀಗೇನು?" ಎಂದು ನಿರ್ವಾಹವಿಲ್ಲದ ಆತುರವನ್ನು ತೋರಿಸುತ್ತ ಕೇಳಿದೆನು.

ತಿಂಡಿತಿನ್ನುವುದಾಯಿತು. ಭಟ್ಟರು ನೀರು ಕುಡಿದು ತಂಬಿಗೆಯನ್ನು ಬರಿದುಮಾಡಿದರು. ನನಗೂ ಕೊಂಚ ಬಾಯಾರಿಕೆ ತೋರಿತು.

ಶಾಮಣ್ಣನಿಗೆ ಹೇಳಿದೆ. "ಶಾಮಣ್ಣಾ, ನಾನೂ ನೀರು ಕುಡಿಯಬೇಕು. ಮಧ್ಯಾಹ್ನದ ಊಟ ಆಗಾಗ ಬಾಯನ್ನಾರಿಸುತ್ತಲಿದೆ."

ಭಟ್ಟರು ಬರಿಯದನ್ನಾಗಿಸಿಟ್ಟಿದ್ದ ತಂಬಿಗೆಯನ್ನೇ ತೆಗೆದು ಕೊಂಡು, ಶಾಮಣ್ಣ ಒಳಕ್ಕೆ ಹೊರಟ. ಭಟ್ಟರು ನಗುನಗುತ್ತ ಮಾತ ನಾಡಿದರು.

"ನೋಡು ಶಾಮಣ್ಣಾ! ನಮಗೆ ಮಠದಿಂದ ಬಹಿಷ್ಕಾರ ಪತ್ರ ಬಂದಿದೆ. ನಾನು ಮುಟ್ಟಿದ ತಂಬಿಗೆ ತೆಗೆದುಕೊಂಡು ನೀನು ಒಳಕ್ಕೆ ನಡೆದಿದ್ದೀಯೆ. ಒಂದು ಹೋಗಿ ಒಂದಾದೀತು ನೋಡು"

"ಗೊತ್ತಿದೆ ಬಿಡಿ ಭಟ್ಟರೇ! ನಿಮ್ಮ ಮಠದ ಬಹಿಷ್ಕಾರ. ಇನ್ನು ಮೇಲೆ ನಾವು ಆ ಮಠಕ್ಕೆ ಬಹಿಷ್ಕಾರ ಹಾಕೋಣ" ಎಂದು ಶಾಮಣ್ಣ ನುಡಿಯುತ್ತಲೆ ಒಳಕ್ಕೆ ಹೋದ, ನೀರು ತುಂಬಿಕೊಂಡು ಬಂದ. ಕುಡಿದೂ ಆಯಿತು. ಅದೇನೋ, ಭಟ್ಟರೊಡನೆ ಮಾತನಾಡ ಬೇಕೆಂಬ ಬುದ್ಧಿ ನನ್ನಲ್ಲಿಯೂ ಉಂಟಾಗಲು ತೊಡಗಿತು. ಕೊಂಚ ಕುತೂಹಲಿಯಾಗಿಯೆ ಕೇಳಿದೆ. "ಏನು ಭಟ್ಟರೇ! ತಮಗೆ ಮಠ ದಿಂದ ಬಹಿಷ್ಕಾರ ಎಂದಿರಲ್ಲ! ಏತಕ್ಕಾಗಿ ಆ ಬಹಿಷ್ಕಾರ?"

ಭಟ್ಟರು ನಿಡಿದಾಗಿ ಉಸಿರೊಂದನ್ನು ಹಾಕಿದರು. ಬಿಸಿಲಿನಲ್ಲಿ ನಡೆದು ಬಳಲಿಕೆಯುಂಟಾಗಿದ್ದರೂ, ಮುಗುಳುನಗೆ ನೆಲೆಗೊಂಡಿದ್ದ– ಸಹಜ ವಿನೋದದ ಕಳೆಯು ಅವರ ಮುಖವು ಬಾಡಿಬತ್ತಿಯಾಯಿತು. ತಗ್ಗಿದ ದನಿಯಲ್ಲಿ ಹೇಳಿದರು.

"ನಮ್ಮ ಪ್ರಾರಬ್ಧರಾಯರೇ! ಅದಕ್ಕಾಗಿ ಬಹಿಷ್ಕಾರ. ಅಪ ರಾಧವಿಲ್ಲದೆ ಶಿಕ್ಷೆಗೆ ಒಳಗಾಗಬೇಕೆಂದರೆ ಪ್ರಾರಬ್ಧವಲ್ಲದೆ ಇನ್ನೇನು? ಹೇಳಿ."

ಶಾಮಣ್ಣ ಹೇಳಲುತೊಡಗಿದ. "ಕಿಟ್ಟಣ್ಣಾ ಈ ಭಟ್ಟರ ಜೀವ ನದ ಕಥೆಯೆಂದರೆ ಅದೊಂದು ವನವಾಸದ ಕಥೆ. ಯಾರಾದರೂ

ಒಳ್ಳೆಯ ಕತೆಗಾರರು ಅದನ್ನು ಬರೆದರೆ, ಓದಿದವರ ಕರುಳು ಕರಗಿ ಹೋಗಬೇಕು ನೋಡು. ಅಂತಹ ಕರುಣಕಥೆ"

ಶಾಮಣ್ಣನ ಮಾತುಗಳು ಭಟ್ಟರ ಕಥೆಯನ್ನು ಕೇಳುವ ಆತುರ ವನ್ನು ಹೆಚ್ಚಿಸಿದುವು. ಭಟ್ಟರ ವಿಷಯದಲ್ಲಿ ಉಂಟಾದ ಜುಗುಪ್ಸಾ ಭಾವವು ಇದ್ದಕ್ಕಿದ್ದಹಾಗೆಯೆ ಅಳಿದುಹೋಯಿತು. ಭಟ್ಟರಿಗೆ ವಿನಂತಿ ಮಾಡಿಕೊಂಡೆ.

"ಭಟ್ಟರೇ! ದಯವಿಟ್ಟು ನನಗೆ ಕೊಂಚ ತಮ್ಮ ಜೀವನದ ಕಥೆ ಹೇಳುತ್ತೀರಾ? ಕೇಳಬೇಕೆಂದು ಅದೇತಕ್ಕೋ ತುಂಬ ಕುತುಹಲ ವುಂಟಾಗಿ ಬಿಟ್ಟಿದೆ."

"ಅದಕ್ಕೇತಕ್ಕೆ ಇಷ್ಟೊಂದು ವಿನಂತಿ ರಾಯರೇ! ಒಮ್ಮೆಬಿಟ್ಟು ಹತ್ತುಸಲ ಹೇಳುತ್ತೇನೆ. ಯಾರಾದರೂ ನನ್ನ ಕಥೆಯನ್ನು ಕೇಳ ಲಿಕ್ಕೆ ದೊರೆತರೆ, ಹೇಳುವುದಕ್ಕೆ ಬಲು ಉತ್ಸಾಹ ನನಗೆ. ಏನೋ ಭಾರವಾಗಿದ್ದ ಮನಸ್ಸು ಹಗುರಾದಂತೆ ಎನಿಸಿ, ಕೊಂಚ ಸಮಾಧಾನ ವಾಗುವುದು." ಎಂದು ನುಡಿದು ಭಟ್ಟರು ತಮ್ಮ ಕಥೆಗೆ ಮೊದಲು ಮಾಡಿದರು. ಕೇಳುವ ಆತುರದಿಂದ ಕಿವಿ, ಮನಸ್ಸು, ಹೃದಯಗಳನ್ನು ಜಾಗೃತಗೊಳಿಸಿ ನಾನು ಕುಳಿತುಕೊಂಡೆ. ಹತ್ತಾರು ಸಲ ಕೇಳಿದವ ನಿದ್ದರೂ ಮೊದಲನೆಯ ಸಲವೇ ಕೇಳುವವರಂತೆ, ಶಾಮಣ್ಣನೂ ಆತುರ ಭಾವದಿಂದ ಕುಳಿತಿದ್ದ. ಭಟ್ಟರು ಹೇಳಿದುದು ಹೀಗೆ:—

"ನೋಡಿ ರಾಯರೇ! ನಮ್ಮೂರು ಕುರುಡಕೇರಿ. ಇಲ್ಲಿಂದ ಉತ್ತರಕ್ಕೆ ಹನ್ನೆರಡು ಮೈಲಿನ ಅಂತರದಲ್ಲಿದೆ. ಅಲ್ಲಿ 'ನಾಗೇಶ್ವರ' ಎಂಬ ಹೆಸರಿನದೊಂದು ಈಶ್ವರ ದೇವಸ್ಥಾನವಿದೆ. ಆ ದೇವಸ್ಥಾನದ ಲಿಂಗವು ಒಬ್ಬ ಸಿದ್ಧಪುರುಷನಿಂದ ಸ್ಥಾಪಿತವಾಗಿದೆಯೆಂದು, ನಮ್ಮೂರ ಜನರೆಲ್ಲರ ನಂಬಿಕೆ. ಆದುದರಿಂದ ದೇವರಲ್ಲಿ ವಿಶ್ವಾಸ ಹೆಚ್ಚು. ಆ ದೇವ ಸ್ಥಾನದ ಪೂಜಾರಿಕೆ, ನಮ್ಮ ಮನೆತನಕ್ಕೆ ಅದೆಷ್ಟೋ ತಲೆಗಳಿಂದ

ನಡೆದುಕೊಂಡು ಬಂದಿದೆ. ನಮ್ಮ ಹಿರಿಯರೆಲ್ಲರ ಸಂಸಾರವನ್ನು ಸುಖದಿಂದ ಸಾಗಿಸಿದವನು ನಮ್ಮ ನಾಗೇಶ್ವರನೇ ! ಹಿಂದಿನ ಕಾಲ ದಲ್ಲಿ ಜನರಿಗೆ ದೇವರಲ್ಲಿ ಭಕ್ತಿ ವಿಶ್ವಾಸ ಹೆಚ್ಚು. ಒಳ್ಳೆಯ ದಿವಸಗಳೂ ಇದ್ದುವು. ಆದುದರಿಂದಲೆ ನಾಗೇಶ್ವರನಿಗೆ ಭಕ್ತರಿಂದ ಮುಡಿಪು ಹೆಚ್ಚಾಗಿ ಸಿಕ್ಕುತ್ತಿದ್ದಿತು. ದೇವರ ಪ್ರತಿನಿಧಿ ಪೂಜಾರಿಯೇ ಅಲ್ಲವೇ ! ಎಂತಲೇ ನಮ್ಮ ಪೂರ್ವಜರೆಲ್ಲರು, ನಾಗೇಶ್ವರನ ದಯೆಯಿಂದ ಸುಖ ವಾಗಿ ಬದುಕಿಕೊಂಡಿದ್ದರು. ನಮ್ಮ ಅಜ್ಜ-ತಂದೆಯ ತಂದೆ, ತಮ್ಮ ವಯಸ್ಸಿನ ಕೊನೆ-ಕೊನೆಗೆ " ಜನರಲ್ಲಿ ದೈವಭಕ್ತಿ ಕಡಿಮೆಯಾಗ ತೊಡಗಿತು; ಕಲಿಯ ಪ್ರಾಬಲ್ಯ ಹೆಚ್ಚುತ್ತ ನಡೆಯಿತು " ಎಂದು ಆಗಾಗ ಅನ್ನುತ್ತಿದ್ದರಂತೆ. ನಮ್ಮ ತಂದೆಯ ಆಡಳಿತದಲ್ಲಿಯಂತೂ ಜನರಲ್ಲಿಯ ದೈವಭಕ್ತಿ ರೂಪಾಯಿಯಲ್ಲಿ ಹನ್ನೆರಡಾಣೆಯಷ್ಟು ಕಡಿಮೆಯಾಯಿತು. ಇದು ನಮ್ಮ ಪ್ರತ್ಯಕ್ಷ ಅನುಭವ. ಹೇಗೆಂದರೆ ನಾಗೇಶ್ವರನಿಗೆ ಒಂದು ರೂಪಾಯಿ ಮುಡಿಪನ್ನು ಇದುವರೆಗೆ ಸಲ್ಲಿ ಸುತ್ತ ಬಂದವರು, ಒಮ್ಮೆಲೆ ನಾಲ್ಕಾಣೆಗೆ ಇಳಿಸಿದರು. ಭಕ್ತಿ ಕಡಿಮೆ ಯಾಯಿತು; ಮುಡಿಪು ಕಡಿಮೆಯಾಯಿತು; ಆದರೇನು ! ನಮ್ಮ ಮನೆಯ ಜನರು ಕಡಿಮೆಯಾಗಲಿಲ್ಲ. ಜನರಿಗಿದ್ದ ಹೊಟ್ಟೆಯ ಆಳತೆ ಕಡಿಮೆಯಾಗಲಿಲ್ಲ. ಅದಕ್ಕಾಗಿ ಮನೆಯ ವೆಚ್ಚವೂ ಕಡಿಮೆಯಾಗಲಿಲ್ಲ.

ನಮ್ಮ ತಂದೆ ನಾಗೇಶ್ವರನ ಪೂಜಾರಿಕೆಯೊಂದಿಗೆ, ಅಲ್ಪ ಸ್ವಲ್ಪ ಹಣ ಸಂಪಾದಿಸುವ ಇನ್ನೊಂದು ಉದ್ಯೋಗವನ್ನೂ ಕೈಕೊಂಡಿದ್ದರು. ಏನೇನೋ ಕೆಲವು ಹುಲ್ಲು, ಹಸುರೆಲೆ, ಬೇರು, ಚಕ್ಕೆಗಳನ್ನು ಮನೆ ಯಲ್ಲಿ ಕೂಡಿಸಿಟ್ಟಿರುವರು. ಹುಗುಳು, ನೆಗಡಿ, ಕೆಮ್ಮು, ಕನಾರಿಕೆ ಎಂದು ಬಂದ ಹಳ್ಳಿಗರಿಗೆ, ಹುಲ್ಲು-ಹಸುರೆಲೆಯ ಕಷಾಯವನ್ನೋ ಬೇರು-ಚಕ್ಕೆಗಳ ಚೂರ್ಣವನ್ನೋ ಔಷಧಿಯಾಗಿ ಕೊಡುವರು. ಜನರೂ ನಾಗೇಶ್ವರನ ಮೇಲೆ ಭಾರ ಹಾಕಿ ಔಷಧ ತೆಗೆದುಕೊಳ್ಳು

ವರು. ನಾಗೇಶ್ವರನಲ್ಲಿದ್ದಷ್ಟೇ ನಮ್ಮ ತಂದೆಯ ಔಷಧದಲ್ಲಿ ನಂಬಿಕೆ ಯುವರಿಗೆ. ರೋಗ ವಾಸಿಯಾದರೆ ಏನಾದರೂ ಪ್ರತಿಫಲ ಸಿಕ್ಕುವುದು. ಆಗದಿದ್ದರೆ,ಔಷಧಿಯಾಗಿ ಕೊಟ್ಟಿದ್ದ ಹುಲ್ಲು,ಹಸುರು,ಬೇರು, ತೊಗಟೆ ಗಳು ವೆಚ್ಚವಾಗುವುವು. ಅಂತೂ ನಮ್ಮ ತಂದೆಯವರ ಆ ಉದ್ಯೋಗ ಲಾಭಕರವಾಗಿದ್ದಿತು. ಮುಡಿಪಿನಲ್ಲಿ ಕೊರತೆ ಬಿದ್ದ ಹನ್ನೆರಡಾಣೆ ಯಲ್ಲಿ ಐದಾರಾಣೆಯಷ್ಟನ್ನಾದರೂ ವೈದ್ಯಕವು ತುಂಬಿಕೊಡುತ್ತಿ ದ್ದಿತು, ಎಂತಲೇ ಉಪವಾಸ ಬೀಳುವ ದಿವಸಗಳನ್ನು ಹೆಚ್ಚಾಗಿ ತಂದು ಕೊಳ್ಳದೆ, ನಮ್ಮ ತಂದೆ ಸಂಸಾರವನ್ನು ಸಾಗಿಸಿದ್ದರು. ತನ್ನದೊಂದು ಹೊಟ್ಟೆಯ ಭಾರವನ್ನು ಕಡಿಮೆ ಮಾಡಿದರೆ,ತನ್ನ ಪ್ರೀತಿಯ ಪತಿಯೂ ಮುದ್ದುಮಕ್ಕಳೂ ಹೊಟ್ಟೆತುಂಬ ಉಂಡುಕೊಂಡಿರಬಹುದೆಂಬ ಭಾವನೆಯಿಂದಲೊ ಏನೋ ! ನಮ್ಮ ತಾಯಿ ಬೇಗನೆ ನಮ್ಮನ್ನಗಲಿ ದಳು. ಆಗ ನನಗೆ ಹದಿನೆಂಟು ವರ್ಷದ ವಯಸ್ಸು. ತಮ್ಮನೊಬ್ಬ ಹದಿಮೂರು ವರ್ಷದವನು. ಇಬ್ಬರು ತಂಗಿಯರು; ಒಬ್ಬಾಕೆಗೆ ನಾಲ್ಕು ವರ್ಷ; ಇನ್ನೊಬ್ಬಾಕೆ ಒಂದುವರೆ ವರುಷದ ಎಳೆಮಗು. ಹೆಳವನು ಹೊರೆ ಹೊತ್ತು ಸಾಗಿದಂತೆ,ಕನವಿನಿಯಿಂದ ಹೇಗೆ ಹೇಗೋ ನಮ್ಮ ಸಂಸಾರದ ಗಾಣವನ್ನು ಸಾಗಿಸಿದ್ದೆವು. ನಮ್ಮ ಸಂಸಾರದ ಗಾಣಕ್ಕೆ ನಮ್ಮ ಕುಟುಂಬದ ಜನರ ದೇಹಗಳೇ ಕಬ್ಬುಗಳು. ನಿಜ ವಾದ ಕಬ್ಬಿನ ರಸವು ಕುದಿದು, ಬೆಲ್ಲವಾಗಿ, ಜನರ ಬಾಯನ್ನು ಸಿಹಿ ಸಿಹಿಯಾಗಿ ಮಾಡುವುದು. ನಮ್ಮ ದೇಹದ ಕಬ್ಬಿನ ರಸವು ಕುದಿದು, ಆವಿಯಾಗಿ, ನಿಟ್ಟುಸಿರಿನೊಡನೆ ಆಕಾಶವನ್ನು ಸೇರುವುದು; ದೇವ ಲೋಕದ ದೇವತೆಗಳ ಬಾಯನ್ನೂ ಕಹಿಕಹಿಯಾಗಿಸುವುದು. ಕೇವಲ ಬದುಕಿಕೊಂಡಿರಬೇಕೆಂಬ ಆಶೆಯೊಂದಲ್ಲದೆ, ನಮಗೆ ಬ್ಧದುಕಿರಲಿಕ್ಕೆ ಬೇರೆ ಯಾವ ಆಶೆಗಳೂ ಇರಲಿಲ್ಲ.

ಇನ್ನೊಂದು ವಿಷಯ: ದೇವಾಲಯದ ನಂದಾದೀಪದ ಎಣ್ಣೆಯ ವೆಚ್ಚಕ್ಕೆಂದು ಮೂರುಕೂರಿಗೆಯದೊಂದು ಹೊಲವಿದೆ. ಆ ಹೊಲವು

ನಮ್ಮ ಅಧಿಕಾರದಲ್ಲಿದೆ. ಮಳೆಯು ನಮ್ಮ ಕುರುಡಕೇರಿಯ ಸಮೀಪಕ್ಕೆ ಒಂದೊಡನೆಯೇ ಅದರ ಕಣ್ಣುಗಳೇ ಕುರುಡಾಗಿ ಹೋಗಿ, ಮುಂದಕ್ಕೆ ಹೆಜ್ಜೆಯಿಕ್ಕಲಾರದೆ ನಿಂತುಬಿಡುತ್ತದೋ! ಇಲ್ಲವೆ ನಾಗೇಶ್ವರನು ತನ್ನ ಕೊರಳಿನ ನಾಗದ ಹೆಡೆಯನ್ನು ನಮ್ಮೂರ ಮೇಲೆ ಕೊಡೆಯಾಗಿ ಹಿಡಿದಿದ್ದಾನೋ ಕಾಣೆ. ಆದ ಮಳೆ ನಮ್ಮೂರ ಸೀಮೆಯಿಂದಾಚೆಗೇ ಆಗುತ್ತಿರುತ್ತದೆ. ಒಂದು ವೇಳೆ ಅಪ್ಪಿತಪ್ಪಿ ನಮ್ಮೂರಿಗೆ ಮಳೆಯಾದರೆ, ನಮ್ಮದು ಅಷ್ಟಿಷ್ಟಕ್ಕೆ ತೋಯುವ ಹೊಲವಲ್ಲ. ದೇವರ ಹೊಲ! ಏನಾದರೂ ಹೆಚ್ಚುಗಾರಿಕೆ ಬೇಡವೇ! ನಾವು ಹೊಲವನ್ನು ಉಪಯೋಗಿಸುವವರೆಂದು, ದೇವರಿಗೆ ನಂದಾದೀಪವನ್ನಂತೂ ಹಚ್ಚಲಿಕ್ಕೇ ಬೇಕು. ಅದರ ವೆಚ್ಚವಲ್ಲದೆ, ಹೊಲಕ್ಕಾಗಿ ಸರಕಾರಕ್ಕೆ ಮೂರುವರೆ ರೂಪಾಯಿ 'ಲೋಕಲ್ ಫಂಡ್' ಎಂದು ನಾವೇ ಸಲ್ಲಿಸಬೇಕಾಗುತ್ತಿದ್ದಿತು. ಇದೆಲ್ಲವೂ ಭಕ್ತರಿತ್ತ—ಮುಡುಪಿನ ನಾಲ್ಕಾಣೆಯ ಹಣದಲ್ಲಿ ಸಾಗುತ್ತಿದ್ದಿತು; ಅಂತೂ 'ನಮಗೂ ಒಂದು ಹೊಲವಿದೆ' ಎಂದು ಹೆಮ್ಮೆಯಿಂದ ಹೇಳುವುದಕ್ಕೆ ಆ ಹೊಲದ ಉಪಯೋಗ ನಮಗೆ.

ತಂದೆಯನ್ನು ಬಿಟ್ಟರೆ ಮನೆಯಲ್ಲಿ ಎಲ್ಲರಿಗಿಂತ ನಾನು ಹಿರಿಯ. 'ಸಂಸಾರದಲ್ಲಿ ನನ್ನಿಂದ ಹೆಚ್ಚಾಗಿ ಸಹಾಯವೇನೂ ಆಗದಿದ್ದರೂ, ನನ್ನ ಹೊಟ್ಟೆಯ ಭಾರವನ್ನಾದರೂ ಕಡಿಮೆ ಮಾಡೋಣ' ಎಂದು ತೋರಿತು ನನಗೆ. ಕೂಡಲೆ ತಂದೆಯ ಒಪ್ಪಿಗೆಯನ್ನು ಪಡೆದುಕೊಂಡು, ಒತ್ತಾಯದಿಂದ ದೇಹವನ್ನೆಳೆದುಕೊಂಡು ಈ ಊರಿಗೆ ಬಂದುಬಿಟ್ಟೆ. ವೈದಿಕವೃತ್ತಿಯೆಂದು ಕಾಯಕಷ್ಟವಿಲ್ಲದೆ ಹೊಟ್ಟೆ ತುಂಬಿಕೊಳ್ಳುವ ಕೆಲಸಕ್ಕೆ ತೊಡಗಿದೆ. ಮನೆಯವರು ಪಡುತ್ತಿದ್ದ ಕಷ್ಟವೂ ಕಣ್ಣು—ಮರೆಯಾಯಿತು. ಶಾಮಣ್ಣನಂತಹ ನಾಲ್ಕುಜನ ಸ್ನೇಹಿತರ ಪರಿಚಯವೂ ಆಯಿತು. ಇದ್ದ ಬದುಕನ್ನೇ ಒಳ್ಳೆಯದನ್ನಾಗಿ ಕಲ್ಪಿಸಿಕೊಂಡು ಕಾಲ ನೂಕುತ್ತಲಿದ್ದೆ. ನನ್ನ ಜೀವನದಲ್ಲಿಯ ಸೌಖ್ಯದ

ಭಾಗವೆಂದರೆ, ನಿಮ್ಮಂತಹ ನಾಲ್ಕು ಜನರೊಡನೆ ನಗುತ್ತ ಕಲೆಯುತ್ತ ಲಿರುವುದೇಷ್ಟೋ ಅಷ್ಟೇ. ಆಗಷ್ಟು ಮಾತ್ರ ಮಡುವಿನಲ್ಲಿ ಮುಳು ಗುತಿರುವವನ ನಡುವಿಗೆ, ಯಾರೋ ಬಂದು – ಮೆಲ್ಲಗೆ ಈಸುಗುಂಬಳ ಕಾಯಿಯನ್ನು ಕಟ್ಟಿದಂತೆ ಮನಸ್ಸಿಗೆ ಕೊಂಚ ಹಾಯಾಗಿರುವುದು.

ಅವರಿವರ ಸಿರಿವಂತರ ಸುಖಜೀವನವನ್ನು ನೋಡಿದಾಗ, ಪ್ರೀತಿ ಯಿಂದಿದ್ದ ಗಂಡಹೆಂಡಿರ ದಾಂಪತ್ಯಜೀವನವನ್ನು ಕಂಡಾಗ, ತಂದೆ-ತಾಯಿಗಳು ವಾತ್ಸಲ್ಯದಿಂದ ಮಕ್ಕಳನ್ನು ಮುತ್ತಿಟ್ಟು ಮುಂಡಾಡು ವುದು ಕಣ್ಣಿಗೆ ಬಿದ್ದಾಗ, ನನ್ನ ಬಗೆಯ ಕಡಲಲ್ಲಿ ಬಿರುಗಾಳಿ ಬೀಸುವುದು. ಸಾವಿರಾರು ಅಲೆಗಳು ಏಳುವವು. ಅಂತಹ ಸುಖ ಜೀವನದ-ದಾಂಪತ್ಯಪ್ರೇಮದ-ಪುತ್ರವಾತ್ಸಲ್ಯದ ಬಯಕೆಯುಂಟಾಗು ವುದು. ಇಂತಹ ಯೋಚನೆಗಳಿಂದ ನಾನು ಅದೆಷ್ಟೋ ರಾತ್ರಿಗಳನ್ನು ಕಣ್ಣಿಗೆ ಕಣ್ಣು ಹಚ್ಚದೆ ಕಳೆದಿರುವೆನು; ಮತ್ತೆ ಹಗಲು ಬಂದೊಡನೆಯೆ ಹೊಟ್ಟೆಯಕಿಚ್ಚನ್ನಾರಿಸಲು ಗೆಳೆಯರೊಡನೆ ನಗೆಮಾತಿನ ಮಳೆ ಸುರಿ ಸುತಿರುವೆನು. ಇದ್ದುದರಲ್ಲಿಯೇ ನನ್ನದೊಂದು ಸುದೈವ; ಅನೇಕ ಜನರು ಆತ್ಮೀಯಭಾವದಿಂದ ನನ್ನೊಡನೆ ಮಾತನಾಡುತ್ತಿರುವರು.

* * * *

ಹೀಗೆಯೆ ಒಂಬತ್ತು ವರ್ಷಗಳು ಕಳೆದುವು. ದಿವಸಗಳೇನು ಜನರ ಕಷ್ಟವನ್ನುನೋಡುತ್ತ, ಮರುಕಗೊಂಡು ತಡೆದು ನಿಲ್ಲುವವೇ? ಕಾಲರಾಯನ ಕೈಯಚಕ್ರದ ತಿರುಗುಗಳವು. ಮನಸ್ಸು – ಬುದ್ಧಿ – ಹೃದಯಗಳೆಂಬ ದಿವ್ಯಶಕ್ತಿಗಳನ್ನು ಪಡೆದ ಮಾನವರೇ ಲೋಕದ ಕಷ್ಟವನ್ನು ಕಂಡು ಕಣ್ಣುಮುಚ್ಚಿ ನಡೆದಿರಲು, ದಿವಸಗಳೇಕೆ ಕಣ್ಣು ಮುಚ್ಚಿ ಸಾಗಬಾರದು! ಹೊಳೆಯ ಅಲೆಗಳಂತೆ, ಒಂದರ ಹಿಂದೆ ಒಂದು ಸಾಲುಗೊಂಡು ಹಾಗೆಯೇ ಸಾಗಿಬಿಟ್ಟುವು.

ಹೋದ ವರ್ಷದ ಜ್ಯೇಷ್ಠಮಾಸದಲ್ಲಿ ಒಂದುದಿನ ಹಗಲು

ಮೂರು ಗಂಟೆಯಾಗಿರಬಹುದು; ನಾನು ಇಲ್ಲಿಯೇ ಶಾಮಣ್ಣನ ಜೊತೆಗೆ ಮಾತನಾಡುತ್ತ ಕುಳಿತಿದ್ದೆ. ಕಾರಣಾಂತರದಿಂದ ಈ ಊರಿಗೆ ಬಂದಿದ್ದ– ನಮ್ಮೂರ ಒಕ್ಕಲಿಗನೊಬ್ಬ ಕಾಗದವೊಂದನ್ನು ತಂದು ಕೊಟ್ಟ. ನಮ್ಮ ತಂದೆಯು ಕಾಗದವದು.

" ಊರಲ್ಲಿ ಪ್ಲೇಗಿನ ಗಲಾಟೆ ಬಹಳವಾಗಿದೆ. ದಿನವೂ ಮೂರು ನಾಲ್ಕು ಜನರು ಸಾಯುತ್ತಿದ್ದಾರೆ. ನಿನ್ನ ತಮ್ಮ ಗೋವಿಂದನಿಗೆ ನಿನ್ನೆಯ ಬೆಳಗಿನಲ್ಲಿಯೆ ಜ್ವರ ಬಂದಿದೆ. ಗಜ್ಜೆಯಲ್ಲಿ ಗಡ್ಡೆಯೆದ್ದಿದೆ. ಮೈಮೇಲೆ ಎಚ್ಚರವೇ ಇಲ್ಲ. ದೇವರೇ ಇದರಿಂದ ಪಾರುಮಾಡಬೇಕು. ನೀನು ಬೇಗನೆ ಹೊರಟು ಬಂದುಬಿಡು ?"

ಇದಿಷ್ಟು ಕಾಗದದೊಳಗಿದ್ದ ಸಂಗತಿ. ಓದಿ ನೋಡಿ ಎದೆಯು ಅದುರಿತು. ಎಡದ ಕಣ್ಣು ಹಾರತೊಡಗಿತು. ಆ ಕಾಗದ ನನಗೆ ಒಂದು ದಿವಸ ತಡೆಯಾಗಿ ತಲ್ಪಿದ್ದಿತು. ಆ ಒಕ್ಕಲಿಗನು ಮೊದಲು ದಿನವೇ ಈ ಊರಿಗೆ ಬರುವವನು; ಏನೋ ತೊಂದರೆಯೊದಗಿ ಮರು ದಿನ ಬಂದಿದ್ದನು. " ವೇಳೆ ಹೊತ್ತು ಹೇಳಿಕೇಳಿ ಬರುವುದಿಲ್ಲ; ಏನೋ ಜೊತೆಗೆ ಇರಲಿ ! " ಎಂದು ಹೇಳಿ, ಶಾಮಣ್ಣನ ಕಡೆಯಿಂದ ಕೈಗಡ ವೆಂದು ಐದುರೂಪಾಯಿಗಳನ್ನು ತೆಗೆದುಕೊಂಡೆ. ಕುಳಿತಿದ್ದ ಹಾಗೆಯೇ ಎದ್ದು ಕುರುಡಕೇರಿಯ ದಾರಿಯನ್ನು ಹಿಡಿದೆ.

ನಮ್ಮೂರ ದಾರಿಯೆಂದರೆ ಅದೊಂದು ದಾರಿ ! ಉದ್ದಕ್ಕೂ ಹಳ್ಳವನ್ನು ಇಳಿಯಬೇಕು, ದಿಣ್ಣೆಯನ್ನು ಹತ್ತಬೇಕು. ಸಾಲದುದಕ್ಕೆ ಸರ್ವಜ್ಞನು ಹೇಳಿರುವನಲ್ಲಾ; ಹಾಗೆ– ' ಬಟ್ಟೆಬಟ್ಟೆಯೊಳೆಲ್ಲ ಹೊಟ್ಟೆ ಜಾಲಿಯ ಮುಳ್ಳು ' ಗಳು; ಚೂಪಾದ ಬೆಣಚುಕಲ್ಲುಗಳು. ಅನೇಕ ಆಲೋಚನೆಗಳಲ್ಲಿ ತೊಡಗಿದ್ದ ಮನಸ್ಸು, ಕಣ್ಣುಗಳ ಮುಂದೆ ಮಬ್ಬಿನ ಮುಸುಕನ್ನು ಹರಡಿದ್ದಿತು. ಆದುದರಿಂದ ದಾರಿಯಲ್ಲಿ ಬಿದ್ದಿದ್ದ ಮೊನೆಮುಳ್ಳುಗಳೆಷ್ಟೋ ಅಂಗಾಲಲ್ಲಿ ಮನೆಮಾಡಿದುವು. ಚೂಪುಗಲ್ಲು

ಗಳು ಕಾಲ ಬೆರಳುಗಳನ್ನು ಮುತ್ತಿಟ್ಟು, ರಾಗರಸವನ್ನು ಹೊರಕ್ಕೆ ಕಾಣಿಸಿದುವು. ಇದಾವುದರ ಅರಿವೂ ಇಲ್ಲದೆ ನನ್ನ ದಾರಿ ಸಾಗಿದ್ದಿತು. ಅಂತಃಕರಣದವರು ಆಪತ್ತಿಯಲ್ಲಿರುವಾಗ ಒಳ್ಳೆಯ ವಿಚಾರಗಳು ತಲೆದೋರುವುವೇನು! ಏನೇನೋ ಅನಿಷ್ಟ-ಅನಿಷ್ಟ ಕಲ್ಪನೆಗಳ ಅಲೆಯೆದ್ದು ಮೈಮನಸುಗಳು ಜುಮ್ಮೆನ್ನುವವು. ಎದೆಯಲ್ಲಿ ಮಂಜಿನ ಗಡ್ಡೆಯನ್ನು ಇಕ್ಕಿದಂತಾಗುವುದು. ಮೊದಲೇ ದೂರವಿದ್ದ ದಾರಿಯು ಮತ್ತಿಷ್ಟು ದೂರವೆನಿಸುವುದು. ನಮ್ಮಲ್ಲಿಯ ಬಾಡಿಗೆ ಮೋಟಾರಿನ ಯಂತ್ರವು ಹೇಗೆ ಹೇಗೋ ಪ್ರವಾಸಿಕರನ್ನು ಎಳೆದುಕೊಂಡು ಹೋಗುವಂತೆ, ನಾನೂ ನನ್ನ ಭಾರವಾಗಿದ್ದ ದೇಹವನ್ನು ಎಳೆಯುತ್ತ ಕುರುಡಕೇರಿಗೆ ತಂದುಬಿಟ್ಟೆ. ಊರು ಬಂದೊಡನೆಯೆ ಎದೆಯಲ್ಲಿ ಅವಲಕ್ಕಿಕುಟ್ಟಿದಂತಾಗಲುತೊಡಗಿತು. ಮನೆಗೆ ಹೋದೊಡನೆ ಎಂತಹ ದೃಶ್ಯವನ್ನು ಕಾಣುವೆನೋ—ಎಂದು ಕ್ಷಣಕ್ಷಣಕ್ಕೆ ಮನಸ್ಸು ಹಾರಿಹಾರಿ ಬೀಳುತ್ತಿದ್ದಿತು.

ಮನೆಗೆ ಹೋಗಿ ನೋಡಿದೆ, ಕೆಲಸವೆಲ್ಲವೂ ಮುಗಿದು ಹೋಗಿದ್ದಿತು. ನಮ್ಮ ತಮ್ಮನ ಪ್ರಾಣವು ಹೋಗಿ ಎರಡು ತಾಸಾಗಿದ್ದಿತು. ಹೆಣವು ಹಾಗೆಯೇ ಬಿದ್ದಿದೆ. ಅತ್ತು ಅತ್ತು ಬೇಸತ್ತು ಕುಳಿತಿದ್ದ ನನ್ನ ತಂದೆ-ತಂಗಿಯರು, ನನ್ನನ್ನು ನೋಡಿ ಮತ್ತೆ ಕೂಗಿಕೂಗಿ ಅಳಲು ತೊಡಗಿದರು. ನನ್ನ ಒಡಲಲ್ಲಿ ಎದ್ದ ಅಳಲಿನ ಧಳ್ಳುರಿ, ಕಣ್ಣೀರನ್ನು ಇದ್ದಲ್ಲಿಯೇ ಆವೆಯನ್ನಾಗಿಸಿತು. ನಾಲಗೆಯ ಹಸಿಯನ್ನು ಒಣಗಿಸಿ ಬಿಟ್ಟಿತು. ಹೊರಕ್ಕೆ ಹೊರಡಬೇಕೆನ್ನುತ್ತಿರುವ ಮಾತುಗಳನ್ನು ಕಮರಿಸಿ ಬಿಟ್ಟಿತು. ಗರವು ಹೊಡೆದವನ ಹಾಗೆ ಸುಮ್ಮಗೆ ಕುಳಿತು, ಹತ್ತಿಪ್ಪತ್ತು ನಿಮಿಷಗಳನ್ನು ಕಳೆದೆ. ಬಳಿಕ ತಲೆಯಲ್ಲಿ ತಟ್ಟನೆ ಒಂದು ಯೋಚನೆ ಬಂದಿತು. 'ಈಗ ನಾನೂ ಕೈಕಾಲುಗೆಟ್ಟು ಕುಳಿತುಬಿಟ್ಟರೆ ಸರಿಯಲ್ಲ' ಎನಿಸಿತು. ತಂದೆಯ ಕರುಳಿನ ಅಳಲ

ಬೆಂಕಿ ಪ್ರಜ್ವಲಿಸಿ, ನನ್ನ ಮೈಯನ್ನೆಲ್ಲ ಸುಟ್ಟುಬಿಡುವುದೇನೋ ! ಎಂಬಂತೆ ತೋರಿತು.

ಊರಲ್ಲಿ ಆರೇಳು ಬ್ರಾಹ್ಮಣರ ಮನೆಗಳು. ನಮ್ಮ ತಮ್ಮ ಸತ್ತು ಎರಡು ಗಂಟೆಯಾದರೂ, ಒಬ್ಬರೂ ಇದುವರೆಗೆ ನಮ್ಮ ಮನೆಯ ಕಡೆಗೆ ಹಣಿಯಿಕ್ಕಿ ನೋಡಿರಲಿಲ್ಲ. ನೋಡಿ ! ಬ್ರಾಹ್ಮಣರ ಜನ್ಮದಲ್ಲಿ ಹುಟ್ಟಿ ಬಂದಿದ್ದೇವೆ. ಸ್ಮಶಾನಯಾತ್ರೆಯ ಕೆಲಸವೊಂದು ಸಾಂಗವಾಗಿ ನೆರವೇರಬೇಕಲ್ಲವೆ ? ಹಾಗೆಯೇ ಎದ್ದೆ; ಕಾಲೆಳೆಯುತ್ತ ಎಲ್ಲ ಬ್ರಾಹ್ಮಣರ ಮನೆಗಳಿಗೂ ಹೋಗಿ ಬಂದೆ. ಒಬ್ಬಿಬ್ಬರು ನಿಜ ವಾಗಿಯೆ ಮನೆಯಲ್ಲಿರಲಿಲ್ಲ. ಉಳಿದವರು ಇದ್ದರೂ "ಮನೆಯ ಲ್ಲಿಲ್ಲ" ಎಂದು ಮನೆಯವರಿಂದ ಹೇಳಿಸಿದರು. ಹೊಟ್ಟೆಕಡಿದವರೇ ಮದ್ದು ಕುಡಿಯಬೇಕಲ್ಲವೇ ! ಹಾಗೆಯೇ ಹೋಗಿ ನಮ್ಮೂರ ಗೌಡ ರನ್ನು ಕಂಡೆ. ಅವರು ನಮ್ಮ ತಮ್ಮನ ಸಾವಿಗಾಗಿ ವಿಷಾದವನ್ನು ಪ್ರಕಟಿಸಿ, ಓಲೆಯಕಾರರಿಬ್ಬರನ್ನೂ ಕೆಲವುಜನ ಪಂಚಮರನ್ನೂ ಸಹಾಯಕ್ಕೆ ಕೊಟ್ಟರು. ನಿರ್ವಾಹವಿಲ್ಲವೆಂದು ನಮ್ಮೂರ ಶಾಲೆಯ ಅಧ್ಯಾಪಕರೊಬ್ಬರನ್ನು ಕರೆದೆ. ಕರೆದೊಡನೆಯೆ ಪಾಪ ! ಆತನೂ ಬಂದು ಬಿಟ್ಟ. ನಾನು, ನನ್ನ ತಂದೆ, ಆ ಅಧ್ಯಾಪಕ, ಮೂವರೇ ಸೇರಿ ಶವವನ್ನು ಸ್ಮಶಾನಕ್ಕೆ ಸಾಗಿಸಿದೆವು. ತನ್ನ ಮಮತೆಯ ಮಗನ ಹೆಣವನ್ನು ಹೆಗಲಲ್ಲಿ ಹೊತ್ತು, ತನ್ನ ಕರುಳಿಗೆ ಕೈಯಿಂದಲೇ ಕಿಚ್ಚಿಕ್ಕುವಂತಹ ಸೌಭಾಗ್ಯ ನಮ್ಮ ತಂದೆಯದು. ಆತನ ಅಂದಿನ ಅವಸ್ಥೆ ನೋಡುವುದಕ್ಕೆ ಅಸಹನೀಯವಾದುದು. ಶಾಮಣ್ಣನಿಂದ ಕೈಗಡ ತೆಗೆದುಕೊಂಡ ರೂಪಾಯಿ, ನನ್ನ ತಮ್ಮನ ಅಂತ್ಯಯಾತ್ರೆಯ ಕೆಲಸದಲ್ಲಿ ನನಗೆ ತುಂಬ ಸಹಾಯ ಮಾಡಿದುವು.

ನಾನು ಅಲ್ಲಿಗೆ ಹೋಗುವುದಕ್ಕೆ ಮೊದಲೇ ಜನರು ಒಬ್ಬೊಬ್ಬ ರಾಗಿ ಊರನ್ನು ಬಿಡಲು ತೊಡಗಿದ್ದರು. ಅನುಕೂಲವಿದ್ದವರು

ಹತ್ತಿರದ ಹಳ್ಳಿಗಳಿಗೆ ಹೋಗಿದ್ದರು; ಅನುಕೂಲವಿಲ್ಲದವರು ಊರು ಬಿಟ್ಟು ದೂರದಲ್ಲಿ ಗುಡಿಸಲು ಹಾಕಿಸಿ ಇರಲು ತೊಡಗಿದ್ದರು. ನಾನೂ ಬೇಗನೆ ಒಂದು ಗುಡಿಸಲು ಹಾಕಿಸಿ ತಂದೆ-ತಂಗಿಯರನ್ನು ಇಟ್ಟು, ತಮ್ಮನ ಉತ್ತರಕ್ರಿಯೆಗಾಗಿ ಏನಾದರೂ ಹಣದ ವ್ಯವಸ್ಥೆ ಮಾಡಲು ಬೇಗನೆ ಈ ಊರಿಗೆ ಬಂದುಬಿಡಬೇಕೆಂಬ ಹವಣಿಕೆಯಲ್ಲಿದ್ದೆ. ಗುಡಿಸಿಲಿಗಾಗಿ ಗಳುಗಳನ್ನೂ, ಸೊಪ್ಪೆಯನ್ನೂ ಅನುಗೊಳಿಸುವುದರಲ್ಲಿದ್ದೆ. ದೈವದ ಆಟ ನೋಡಿ; ನಮ್ಮ ತಮ್ಮ ಸತ್ತ ಮೂರನೆಯ ದಿನವೇ ಬೆಳಗಿನ ಏಳುಗಂಟೆಗೆ, ನನ್ನ ಮೈಯಲ್ಲಿ ಜ್ವರವು ಕಾಣಿಸಿಕೊಂಡಿತು. ವಿಪರೀತ ತಲೆನೋವು. ಕಂಕುಳಲ್ಲಿ ಸೂಜಿಯಿಕ್ಕಿ ಚುಚ್ಚಿದಂತಾಗಲು ತೊಡಗಿತು. ನನ್ನ ಧೈರ್ಯವೆಲ್ಲವೂ ಕರಗಿತು. ಹೆಚ್ಚಾಗಿ ಹೆದರಿಬಿಟ್ಟೆ. ಆದರೆ ನಾನು ಹೆದರಿದುದು ನನ್ನ ಬೇನೆಗಾಗಿ ಅಲ್ಲ; ನಾನು ಸಾಯುವೆನೆಂದು ಅಲ್ಲ. ನನ್ನ ತಮ್ಮನ ಸಾವಿನಿಂದ ತಂದೆಗೊದಗಿದ್ದ ದುಃಖವನ್ನು ಪ್ರತ್ಯಕ್ಷವಾಗಿ ನೋಡಿದುದರಿಂದ ಹೆದರಿದೆ. ' ನಾನೂ ಸತ್ತರೆ ಆತನ ಅವಸ್ಥೆಯೇನು ? ಯಾವುದನ್ನೂ ಕಾಣದ ಈ ಹುಡುಗಿಯರ ಗತಿಯೇನು ? ' ಎಂದು ಹೆದರಿದೆ.

ನಮ್ಮೂರ ಗೌಡರನ್ನು ಕರೆಯಿಸಿಕೊಂಡೆ. ನನಗೆ ಬೇನೆ ಬಂದ ಸಮಾಚಾರ ತಿಳುಹಿಸಿದೆ. ಇನ್ನೂ ಏನೇನೋ ಸುಖದುಃಖದ ಮಾತನ್ನು ತೋಡಿಕೊಂಡೆ. ಗೌಡರು ಸಹಾನುಭೂತಿಯನ್ನು ತೋರಿಸಿ ' ಯೋಚನೆಯನ್ನೇನೂ ಮಾಡಬೇಡಿ ನಾನಿದ್ದೇನೆ ' ಎಂದು ಧೈರ್ಯದ ಮಾತನ್ನೂ ಹೇಳಿದರು.

ತಂದೆ ಹೆಚ್ಚಾಗಿ ಕೈಕಾಲುಕಳೆದುಕೊಳ್ಳುವರೆಂದು ನನ್ನ ಜ್ವರವನ್ನೂ, ಕಂಕುಳ ನೋವನ್ನೂ ಅವರಿಗೆ ತಿಳಿಯಗೊಟ್ಟಿರಲೇ ಇಲ್ಲ. ಆದರೆ, ನನಗೂ ಪ್ಲೇಗು ಬಂದಿತೆಂದು ತಂದೆಗೆ ಯಾವಾಗ ಗೊತ್ತಾಯಿತೆಂಬುದೂ, ಅದರಿಂದ ಅವರ ಅವಸ್ಥೆ ಏನಾಯಿತೆಂಬುದೂ ನನಗೆ

ತಿಳಿಯಲಿಲ್ಲ. ಕಾರಣವೆಂದರೆ, ಮೈಮೇಲೆ ಜೋಳವನ್ನಿಟ್ಟರೆ ಅರಳಾಗುವಂತಹ ಜ್ವರವೂ, ಕೊಡಲಿಯ ಪೆಟ್ಟನ್ನು ಎಡೆಬಿಡದೆ ಹಾಕುತ್ತಿದ್ದಂತೆ ಇರುವ ತಲೆನೋವೂ ಕೂಡಿ, ಬೇಗನೆ ನನ್ನ ಎಚ್ಚರವನ್ನು ತಪ್ಪಿಸಿದುವು.

ಮನುಷ್ಯ ಸರಿಯಾಗಿರುವಾಗಲೇ ರೋಗದ ಹೆದರಿಕೆ; ಮರಣದ ಬೆದರಿಕೆ. ರೋಗ ಬಂದು ಮೈಮೇಲಿನ ಎಚ್ಚರ ತಪ್ಪಿತೆಂದರೆ ಆತನು ರೋಗದ ಗಂಡ; ಮರಣದ ಮಿಂಡ. ಅವನಿಗೆ ಯಾವುದರ ಹೆದರಿಕೆಯೂ ಇರದು. 'ನನ್ನವರು, ಬೇರೆಯವರು' ಎಂಬ ಭೇದ ಭಾವವಿರದು. ಬದುಕಿರಬೇಕೆಂಬ ಆಶೆಯೂ ಅಳಿಯುವುದು. ಸುಗ್ರಾಸದ-ಸುಖಶಯನದ-ಸುಂದರ ವಸ್ತುಗಳ ಮೋಹವು ಬಯಲಾಗುವುದು. ಜೀವಾತ್ಮನು ಮನೋಮಯಕೋಶದಿಂದ ಆಚೆಗೆ ಇನ್ನೆಲ್ಲಿಯೋ ವಿಹರಿಸುತ್ತಿರುವನು. ಔಷಧಿಯೆಂದು ಬಾಯಲ್ಲಿ ಕಹಿಯಾದ-ಖಾರವಾದ ಪದಾರ್ಥಗಳನ್ನು ಹಾಕಿದರೂ ಸರಿಯೆ; ಸಿಹಿಯಾದ-ರುಚಿಯಾದ ಪದಾರ್ಥಗಳನ್ನು ಹಾಕಿದರೂ ಸರಿಯೆ. ಮೈಗೆ ಬರೆಯೆಳೆದರೂ ಸರಿಯೆ; ಮಂಜಿನಗಡ್ಡೆಯ ನೀರಿನ ಪಟ್ಟಿಯನ್ನು ಕಟ್ಟಿದರೂ ಸರಿಯೆ. ಆಗ ಮನುಷ್ಯ ದ್ವಂದ್ವಾತೀತನು. ಸಮದರ್ಶಿಯು. ಸಮಾಧಿಸ್ಥನಾದ ಯೋಗಿಯ ಅವಸ್ಥೆಯನ್ನೇ ಆ ರೋಗಿ ತಳೆದಿರುವನು. ಆದರೆ, ಯೋಗಿ ತನ್ನ ಸಮಾಧಿಯನ್ನು ಸ್ವೇಚ್ಛೆಯಾಗಿ ಇಳಿಸಬಲ್ಲನು; ರೋಗಿ ಇಳಿಸ ಸಲ್ಲನು; ಇಷ್ಟೇ ಭೇದ.

† † † †

ಬೇನೆಯ ಕಸುವು ಕಡಿಮೆಯಾಗಿ ನನಗೆ ಕೊಂಚ ಹೊರಗಿನ ಅರಿವು ಉಂಟಾಯಿತು. ಕಣ್ಣಿಗೆ ಕಾಣುತಿರುವುದು ಕನಸಿನ ನೋಟವೆಂದು ಒಂದು ಬಗೆಯ ಭ್ರಮೆ. ನಾನು ಮಲಗಿದುದು ನಮ್ಮ ಮನೆಯಲ್ಲವೆಂಬುದೂ, ಇನ್ನೆಲ್ಲಿಯೋ ಬೇರೆಕಡೆಗೆ ಮಲಗಿದ್ದೇನೆಂ

ಬುದೂ ಮುಸಕುಮುಸಕಾಗಿ ನನಗೆ ತಿಳಿಯಿತು. ನನ್ನ ಇಬ್ಬರೂ ತಂಗಿಯರು ಬಾಡಿಬತ್ತಿದ ಮುಖದವರಾಗಿ, ಕೆದರಿದ ತಲೆಗೂದಲುಳ್ಳವರಾಗಿ, ಕಂಬನಿಯಿಂದ ತೊಯ್ದು ಕಣ್ಣಿನವರಾಗಿ ಆಗಾಗ ನನ್ನ ಬಳಿಗೆ ಬರುವರು. ನನ್ನ ಒಣಗಿದ ಬಾಯಲ್ಲಿ ನೀರು ಹನಿಸುವರು. ನನಗೆ ಅವರ ಮುಖವನ್ನು ಕನಸಿನಲ್ಲಿ ಕಂಡಂತೆ ಎನಿಸುತಿದ್ದಿತಾದರೂ, ಅವರ ದೈನ್ಯ ದೃಷ್ಟಿ ನನ್ನ ಕರುಳನ್ನು ಕೊರೆಯುತ್ತಿದ್ದಿತು. ನನ್ನ ತಂದೆ ಮಾತ್ರ ನನ್ನ ಬಳಿಗೆ ಬಂದುದನ್ನು ನೋಡಲೇ ಇಲ್ಲ. "ತಂದೆ ಎಲ್ಲಿ?" ಎಂದು ಕೇಳಬೇಕೆಂಬ ಯೋಚನೆ ಮನಸ್ಸಿನಲ್ಲಿ ಉಂಟಾಗುವುದು. ಆದರೆ ಅದೆಷ್ಟು ಯತ್ನಿಸಿದರೂ ಮುಚ್ಚಿದ ಬಾಯಿ ತೆರೆಯದು.

ಮುಂದೆ ಎರಡುದಿನಕ್ಕೆ ಸ್ವಪ್ನಲೋಕದಿಂದ ಜಾಗೃತ ಲೋಕಕ್ಕೆ ಬಂದೆ. ಸಂಪೂರ್ಣವಾಗಿ ಅರಿವು ಬಂದಿತು. ಬಾಯಿಂದ ಮಾತುಗಳು ಹೊರಟುವು. ನಾನು ಮಾತನಾಡಿದುದನ್ನು ಕೇಳಿ ನನ್ನ ತಂಗಿಯರಿಗೆ-ಕಟ್ಟಡವಿಯಲ್ಲಿ ಕಣ್ಣುಕಟ್ಟಿ ಬಿಟ್ಟವರಿಗೆ ಕಾಲು ದಾರಿಯೊಂದು ದೊರೆತಂತೆ—ಕೊಂಚ ಮಟ್ಟಿಗಾದರೂ ಸಮಾಧಾನ ವಾಗಿರಬಹುದು. ಅರಿವು ಬಂದಿತು, ಮಾತು ಬಂದಿತು; ಆದರೆ ಅತ್ತಿತ್ತ ಉಲುಕಾಡಲಿಕ್ಕೆ ನನ್ನಲ್ಲಿ ಶಕ್ತಿಯಿರಲಿಲ್ಲ. ಒಂದು ಪಕ್ಕದಿಂದ ಇನ್ನೊಂದು ಪಕ್ಕಕ್ಕೆ ತಿರುಗಿ ಮಲಗಿಕೊಳ್ಳುವುದು, ನನ್ನ ಸ್ವಾಧೀನದ ಮಾತಾಗಿರಲಿಲ್ಲ. ಮಾತನಾಡಲಿಕ್ಕೆ ಬಂದ ದಿನವೇ ತಂಗಿಯರನ್ನು ಮೊದಲನೆಯ ಪ್ರಶ್ನೆಯಾಗಿ ಕೇಳಿದೆ. "ತಂದೆಯವರು ಎಲ್ಲಿ?"

ಚಿಕ್ಕವಳು ಹುಚ್ಚುಹಿಡಿದ ಮುಖದಿಂದ—ಕಂಗೆಟ್ಟು ಸುಮ್ಮನೆ ಕುಳಿತಿದ್ದಳು. ಹಿರಿಯಳು ಕಣ್ಣೀರು ಸುರಿಸುತ್ತ ಹೇಳಲು ತೊಡಗಿದಳು.

"ಇಲ್ಲಿಯೇ ಮಲಗಿದ್ದಾರೆ ನೋಡು, ನಿನ್ನ ತಲೆಯ ಕಡೆಗೆ; ಅವರಿಗೂ ಪ್ಲೇಗು ಬಂದಿದೆ."

ನಾನು ನಿಧಾನವಾಗಿ ಕಣ್ಣುಗಳನ್ನು ಮೇಲಕ್ಕೆ ಹೊರಳಿಸಿ ನೋಡಿದೆ. ತಂದೆಯವರು ಅರಿವು ಇಲ್ಲದೆ ಬಿದ್ದುಕೊಂಡಿದ್ದರು. ಅತ್ತಿತ್ತ ಉಲುಕುತ್ತಿರಲಿಲ್ಲ. ನೋಡಿಯೇ ನೋಡಿದೆ. ಹೊಟ್ಟೆಯಲ್ಲಿ ಸಾವಿರಾರು ಉರಿಯ ನಾಲಗೆ ಎದ್ದಂತಾಯಿತು. ಎಲ್ಲಿದ್ದವೋ ಏನೋ! ಒಣಗಿ ಹೋಗಿದ್ದ ನನ್ನ ಸುಕ್ಕುಗಣ್ಣುಗಳಲ್ಲಿಯೂ ಕಂಬನಿ ಕಾಣಿಸಿಕೊಂಡುವು. ಬಳಿಕ "ತಂದೆಯವರಿಗೆ ಏನೂ ಆಗುವುದಿಲ್ಲ. ನೀವು ಯೋಚನೆಯನ್ನು ಮಾಡಬೇಡಿ" ಎಂದು ಹುಡುಗಿಯರಿಗೆ ಹುಸಿ-ಧೈರ್ಯವನ್ನು ಹೇಳಿದೆ. ಇಷ್ಟೆಲ್ಲ ದುಃಖದ ಸಮುದ್ರದಲ್ಲಿಯೂ ಸಮಾಧಾನದ ಕಿರುತೊರೆಯೊಂದು ನನ್ನೆದೆಯಲ್ಲಿ ಪ್ರವಹಿಸಿತು. "ಇನ್ನು ನಾನು ಬದುಕಿದೆ; ತಂದೆ ಸತ್ತರೂ ಹುಡುಗಿಯರ ಸಂರ-ಕ್ಷಣಕ್ಕೆ ನಾನು ಉಳಿದಿರುವೆನು" ಎಂಬುದೇ ಆ ಕಿರುತೊರೆಯ ಮೊರೆತ. ಮನೆಯೆಲ್ಲ ಸುಟ್ಟುಹೋಗುತಿರುವಾಗ "ಮುಂದೆ ಹಾಕಿಸಬೇಕಾದ ಮನೆಗೆ, ನಾಲ್ಕು ಗಳುಗಳನ್ನಾದರೂ ಹಿಡಿದುಕೊಂಡೆನಲ್ಲ" ಎಂದು ಸಮಾಧಾನಪಟ್ಟುಕೊಂಡಂತಹದೇ ನನ್ನ ಸಮಾಧಾನದ ಬಗೆ.

ಅಂದು ನನ್ನ ತಂಗಿಯರೊಡನೆ ಆಡಿದ ಮಾತಿನಿಂದ ಇದಿಷ್ಟು ಸಂಗತಿ ಗೊತ್ತಾಯಿತು. "ಗೌಡರು ನಮಗಾಗಿ ಬೇರೆಯೊಂದು ಗುಡಿಸಿಲನ್ನು ಕಟ್ಟಿಸಿದರು. ತಮ್ಮ ಬಂಡಿಯಿಂದಲೇ ನನ್ನನ್ನು ಇಲ್ಲಿ ತಂದು ಹಾಕಿದರು. ಗುಡಿಸಿಲಿಗೆ ಬಂದ ಎರಡನೆಯ ದಿನವೇ ಸಂಜೆಗೆ ತಂದೆ ಮಲಗಿಕೊಂಡರು. ಅವರು ಮಲಗಿ, ಇಂದಿಗೆ ನಾಲ್ಕು ದಿನಗಳಾದುವು. ಗೌಡರು ದಿನಕ್ಕೊಮ್ಮೆ ಇಲ್ಲಿಗೆ ಬಂದು ನೋಡಿಕೊಂಡು ಹೋಗುವರು. ಓಲೆಕಾರನೊಬ್ಬ—ಒಂದುಕೊಡ ನೀರು, ಏಳೆಂಟು ರೊಟ್ಟಿ, ರೊಟ್ಟಿಗೇನಾದರೂ ಜೊತೆ, ಇದಿಷ್ಟನ್ನು ತಂದು ಇಟ್ಟು ಹೋಗುತ್ತಾನೆ. ಅದೇ ನಮ್ಮ ತಂಗಿಯರಿಗೆ ಆಹಾರ. ನನಗೆ, ತಂದೆಗೆ ಬರಿ ಬಿಸಿನೀರೇ ಆಹಾರ. ನೀರನ್ನು ನನ್ನ ಹಿರಿಯ ತಂಗಿ ಕಾಯಿ-

ಸುವಳು. ನಾನು ರೋಗದವನೆಂದು, ನಮ್ಮ ಗುಡಿಸಿಲನ್ನು ಊರಿನ ಗುಡಿಸಿಲುಗಳಿಗೆ ಎರಡು-ಮೂರು ಫರ್ಲಾಂಗಿನಷ್ಟು ದೂರದಲ್ಲಿ ಕಟ್ಟಿಸಲಾಗಿದೆ. ಊರಲ್ಲಿಯ ಬ್ರಾಹ್ಮಣರಾರೂ ನಮ್ಮ ಮನೆಯ ಕಡೆಗೆ ಬಂದಿಲ್ಲ. ”

ಗೌಡರನ್ನು ಮನಸಾರೆ ಕೊಂಡಾಡಿದೆ. ‘ದೇಶಕ್ಕೊಬ್ಬ ದೇವರು ಗತಿ ’ ಎಂದುಕೊಂಡೆ. ‘ ನಾವಿಬ್ಬರೂ ಹೆಣಕ್ಕಿಂತ ಹೆಣವಾಗಿ ಬಿದ್ದುಕೊಂಡಿರಲು, ಕಾಡಿನಲ್ಲಿ—ಜನರಿಂದ ದೂರವಾಗಿದ್ದ ಗುಡಿಸಿಲಲ್ಲಿ ಹಗಲುರಾತ್ರಿಗಳನ್ನು ಹುಡುಗಿಯರು ಹೇಗೆ ಕಳೆದಿರಬಹುದು ? ” ಎಂಬ ಮಾತು ನೆನಪಿಗೆ ಬಂದೊಡನೆಯೆ ಎದೆ ಜುಮ್ಮೆಂದಿತು. ಮೈಮೇಲೆ ಪುಳ್ಕಗಳೆದ್ದುವು. ಬಲಹೀನವಾಗಿದ್ದ ನನ್ನ ಮನಸ್ಸು ಅದರ ಕಲ್ಪನೆಯನ್ನೂ ಮಾಡಲಿಕ್ಕೆ ಹೆದರಿ ಹಿಂಜರಿಯಿತು. ಹುಡುಗಿಯರಿಬ್ಬರ-ಕರುಣಾಪೂರಿತ ಬೆದರುಗಂಗಳ ಗಾಬರಿಯ ನೋಟವು ನಿಮಿಷ-ನಿಮಿಷಕ್ಕೂ ನನ್ನ ಕಣ್ಣಲ್ಲಿ ಚುಚ್ಚುತ್ತಿದ್ದಿತು.

ಅದೇ ದಿವಸ ರಾತ್ರಿಯ ಹನ್ನೆರಡು ಗಂಟೆಯಾಗಿರಬಹುದು. ನಮ್ಮ ತಂದೆಯ ಪ್ರಾಣ, ದೇಹದಿಂದ ಹೊರಕ್ಕೆ ಹೋಗುವ ಮುಂಗುರುತುಗಳನ್ನು ತೋರಿಸತೊಡಗಿತು. ಶ್ವಾಸೋಚ್ಛ್ವಾಸದಲ್ಲಿ ಕಫದ ಗೊರಗೊರಿಕೆ ಬಂದಿತು. ಕೈಯನ್ನೆತ್ತಿ ಹಣೆಗೆ ಒತ್ತಿಕೊಳ್ಳುವುದು, ಕಾಲುಗಳನ್ನು ಮೇಲಕ್ಕೆ ಸೆಳೆದುಕೊಳ್ಳುವುದು, ಸಂಕಟದಿಂದ ‘ ಅಯ್ಯೋ ’ ಎಂದು ಆಗಾಗ ಕೂಗಿಕೊಳ್ಳುವುದು, ಇದೆಲ್ಲವೂ ನಡೆಯಿತು. “ ಅಪ್ಪ ಹೀಗೇಕೆ ಮಾಡುತ್ತಾನೇ ? ” ಎಂದು ಹುಡುಗಿಯರಿಬ್ಬರೂ ಗಾಬರಿಯ ದನಿಯಿಂದ ತಮ್ಮತಮ್ಮೊಳಗೆ ಮಾತನಾಡತೊಡಗಿದರು. ನನಗೆ ಎಲ್ಲವೂ ಕಾಣಿಸುತ್ತಿದ್ದಿತು, ಕೇಳಿಸುತ್ತಿದ್ದಿತು, ತಿಳಿಯುತ್ತಿದ್ದಿತು. ಜ್ಞಾನೇಂದ್ರಿಯಗಳೆಲ್ಲವೂ ತಮ್ಮ ಕಾರ್ಯಕ್ಕೆ ಅಣಿಯಾಗಿದ್ದುವು; ಕರ್ಮೇಂದ್ರಿಯಗಳು ಮಾತ್ರ ಮರಕ್ಕಿಂತ ಮರ—

ವಟ್ಟು ಹೋಗಿದ್ದುವು. 'ಅಂಜಬೇಡಿರಿ' ಎಂದು ಆಗಾಗ ಹುಡು ಗಿಯರಿಗೆ ಧೈರ್ಯ ಹೇಳುತ್ತಿದ್ದೆ ; ಆದರೆ ಒಳಗೊಳಗೆಯೆ ತಂದೆಯೊ ಡನೆ ನಾನೂ ಮರಣ ಸಂಕಟವನ್ನು ಅನುಭವಿಸುತ್ತಿದ್ದೆ.

ತಂದೆಯು ಅವಸ್ಥೆ ಹಾಗೆ. ನನ್ನ ದೇಹದ ದುರ್ಬಲತೆ, ಹೃದ ಯದ ಅಸಹ್ಯ ವೇದನೆ, ಇವುಗಳೊಡನೆಯೆ ಇನ್ನೊಂದು ಸಂಕಟವು ಒದಗಿದ್ದಿತು. ನನ್ನನ್ನು ನೆಲದ ಮೇಲೆಯೇ ಕಂಬಳಿಯೊಂದನ್ನು ಹಾಸಿ, ಅದರಮೇಲೆ ಮಲಗಿಸಿದ್ದರು. ಮೊದಲನೆಯ ದಿವಸವೇ ಚಿಕ್ಕ ದೊಂದು ಅಡ್ಡಮಳೆಯಾಗಿದ್ದಿತು. ಗುಡಿಸಿಲಲ್ಲಿ ತೇವು ಹಬ್ಬಿ ನನ್ನ ಹಾಸಿಗೆಯ ಕೆಳಗೆ ಗೆದ್ದಲು ಹುಳುಗಳೆದ್ದುವು. ನನ್ನ ಬೆನ್ನ ಬುಡದ ಕಂಬಳಿಯನ್ನೆಲ್ಲ ಕೊರೆದು, ಮೇಲಿದ್ದ ನನ್ನ ದೇಹವನ್ನೂ ಕಚ್ಚಲು ತೊಡಗಿದುವು. ಮೈಯಲ್ಲಿ ಇದ್ದರೆ ಕೊಡಗಟ್ಲೆ ನೆತ್ತರವು ಹೊರಕ್ಕೆ ಬರಬಹುದಾಗಿದ್ದಿತು. ಉಲುಕಲಿಕ್ಕೆ ಹವಣಿಸಿದೆ; ಸಾಧ್ಯವಾಗಲಿಲ್ಲ. ಹುಡುಗಿಯರಿಗೆ ಹೇಳಿದರೆ ಹೆದರಿಕೊಳ್ಳುವರೆಂದು, ಅವರಿಗೆ ಹೇಳದೆ ಗೆದ್ದಲಿನ ಕಡಿತವನ್ನು ಸಹಿಸುತ್ತ ಬಿದ್ದಲ್ಲಿಯೆ ಬಿದ್ದುಕೊಂಡಿದ್ದೆ. ಹುಡುಗಿಯರಿಗೆ ತಂದೆಯ ಬಳಿಯಲ್ಲಿಯೆ ಕುಳಿತಿರುವಂತೆ ಹೇಳಿದ್ದೆ. ಅವರು ಅಲ್ಲಿಯೇ ಕುಳಿತಿದ್ದರು. ರಾತ್ರಿ ಒಂದು ಗಂಟೆಯಾಗಿರಬಹುದು. ಚಿಮಣಿಯಲ್ಲಿಯ ಎಣ್ಣೆಯೆಲ್ಲ ತೀರುತ್ತ ಬಂದಿತ್ತು. ಮೊದ ಮೊದಲು ಅದರ ಮುಖವು ನನ್ನ ಮುಖದಂತೆ ಆಯಿತು. ಬಳಿಕ ತಂದೆಯವರ ಪ್ರಾಣಜ್ಯೋತಿಯಂತೆ ಹೊಯ್ದಾಡತೊಡಗಿತು. ಗುಡಿ ಸಿಲ ಸಂದಿಯೊಳಗಿಂದ ಮುಂಗಾರುಗಾಳಿಯೊಮ್ಮೆ ಭುಸ್ಸೆಂದು ಒಳಗೆ ನುಗ್ಗಿತು. ಆಗಲೆ ನಮ್ಮ ತಂದೆಯ ಕರಿಯ ಗುಡ್ಡೆಗಳು ಮೇಲಕ್ಕೇರು ತ್ತಿದ್ದುವು. ಉಸಿರು ತೀರ ನಿಧಾನವಾಗಿ ಕೇಳುತ್ತಿದ್ದಿತು. ಅವಯವ ಗಳ ಚಲನೆಯೆಲ್ಲ ನಿಂತು ಹೋಗಿದ್ದಿತು. ಒಳಗೆ ನುಗ್ಗಿದ ಗಾಳಿ ದೀಪ ವನ್ನು ನಂದಿಸಿಬಿಟ್ಟಿತು. ಆ ಗಾಳಿಯೊಡನೆಯೆ ಬಂದ **ಆತನ** ದೂತರು

ನಮ್ಮ ತಂದೆಯು ಪ್ರಾಣಜ್ಯೋತಿಯನ್ನು ಸೆಳೆದು ಒಯ್ದಿರಬಹುದು.

ಕೃಷ್ಣಪಕ್ಷ, ಮುಂಗಾರುಮೋಡ ಮುಗಿಲನ್ನು ಬಾಸಣಿಸಿ ಬಿಟ್ಟಿದೆ. ಕಾಡಿಗೆಯರಾಶಿಯಂತಹ ಕಗ್ಗತ್ತಲು ಲೋಕವನ್ನೆಲ್ಲ ಮುಸುಕಿ ಬಿಟ್ಟಿದೆ. ದೀಪವು ಇಲ್ಲದಂತಾಗಲು, ಹೊರಗಿದ್ದ ಕತ್ತಲು-ಕಾವಲಿಲ್ಲದ ಕೋಶಾಗಾರದಲ್ಲಿ ಕಳ್ಳರು ನುಗ್ಗುವಂತೆ-ನಿರಾತಂಕವಾಗಿ ಗುಡಿಸಿಲಲ್ಲಿ ನುಗ್ಗಿಬಿಟ್ಟಿತು. ನಾವಿದ್ದುದು ಮನುಷ್ಯವಸತಿಯಿಂದ ದೂರ; ಹೊರಕ್ಕೆ ಜೀರುಂಡೆಯು 'ಜಿರ್‌ರ್ ಜಿಟ್' ಎಂಬ ಕರ್ಣಕಠೋರವಾದ ಸಪ್ಪಳ; ಸಮೀಪದ ಮರಗಳಲ್ಲಿ ಹಾಲಕ್ಕಿ ಕಿಲಬಿಲಿಗುಟ್ಟುತ್ತಿದ್ದುವು. ಗೂಗೆಗಳ'ಘೂಘೂ'ಎಂಬ ಧ್ವನಿಯೂ ಆಗಾಗ ಕಿವಿಗೆ ಬಿದ್ದು ಹೃದಯವನ್ನು ಭೇದಿಸುತ್ತಿದ್ದಿತು. ಗುಡಿಸಿಲಲ್ಲಿ ಬೇರೆ ಎಣ್ಣೆ ಇರಲಿಲ್ಲ. ಚಿಕ್ಕಹುಡುಗಿ ದೀಪಹಚ್ಚುವ ಕಡ್ಡಿಯಪೆಟ್ಟಿಗೆಯನ್ನು ಎಲ್ಲಿ ಇಟ್ಟಿದ್ದಳೋ! ಕತ್ತಲೆಯಲ್ಲಿ ಹುಡುಕಿದರೆ ಸಿಕ್ಕಲಿಲ್ಲ. ನನಗೇನೂ ತೋರದಾಯಿತು. ಮಾತನಾಡಬೇಕೆಂದರೆ ಮತ್ತೆ ನಾಲಗೆಯೇಳದಾಯಿತು. 'ನಾನು ಮೊದಲೇ ಸತ್ತಿದ್ದರೆ ಚೆನ್ನಾಗಿತ್ತು' ಎಂದು ಯೋಚನೆ ಬರಲುತೊಡಗಿತು. ನನ್ನ ಹಾಡು ಹೀಗೆ, ಹುಡುಗಿಯರ ಗತಿ ಏನಾಗಿರಬಹುದು? ನೀವೇ ಊಹಿಸಿನೋಡಿ.

ಚಿಕ್ಕಹುಡುಗಿ "ಅಣ್ಣಾ! ಅಣ್ಣಾ! ಅಪ್ಪಾ! ಅಪ್ಪಾ! ಎಂದು ಅಳಲುತೊಡಗಿದಳು. ಹಿರಿಯವಳಿಗೆ ಏನು ಹೊಳೆಯಿತೋ ಏನೋ! ಗುಡಿಸಿಲಿನ ಹೊರಕ್ಕೆಹೋಗಿ ನಿಂತು, ಗಟ್ಟಿಯಾಗಿ ಶಂಖವಾದ್ಯವನ್ನು ಮಾಡಲು ತೊಡಗಿದಳು. ಅದರ ಸಪ್ಪಳ ಯಾವ ಪುಣ್ಯಾತ್ಮನಿಗೆ ಕೇಳಿಸಿತೇನೋ; ಹೋಗಿ ಗೌಡರಿಗೆ ತಿಳುಹಿಸಿದನೆಂತೆ. ಹದಿನೈದು ಇಪ್ಪತ್ತು ನಿಮಿಷಗಳಲ್ಲಿಯೆ ನಾಲ್ಕಾರು ಜನರನ್ನು ಒಡಗೊಂಡು 'ಗೌಡರು' ಅಲ್ಲಿಗೆ ಬಂದರು. ಅವರು ಜೊತೆಗೆ ತಂದಿದ್ದ ಕೈದೀಪ ಗುಡಿಸಿಲಲ್ಲಿ ಮತ್ತೆ ಬೆಳಕನ್ನು ಮಾಡಿತು; ಆದರೆ ಹೊರಟುಹೋಗಿದ್ದ ನಮ್ಮ

ತಂದೆಯ ಪ್ರಾಣದೀಪ, ಅವರ ದೇಹದ ದೇವಾಲಯದಲ್ಲಿ ಶಾಶ್ವತ ವಾದ ಅಂಧಕಾರವನ್ನು ಹರಡಿ ಹೋಗಿದ್ದಿತು. ಹುಡುಗಿಯರಿಬ್ಬರೂ ಎದೆಎದೆ ಬಡಿದುಕೊಂಡು ಅಳಲುತೊಡಗಿದರು. ನನಗೆ ಅಳುವೂ ಬರಲೊಲ್ಲದು; ಮಾತೂ ಹೊರಡಲೊಲ್ಲದು. ಗೌಡರೂ, ಇನ್ನುಳಿದವರೂ ನಮ್ಮ ತಂಗಿಯರಿಗೆ ಬಗೆಬಗೆಯಿಂದ ಸಮಾಧಾನ ಹೇಳುತ್ತಿದ್ದರು. ಬಂದಿದ್ದವರಲ್ಲಿ ಒಬ್ಬನ ದೃಷ್ಟಿ ಸಹಜವಾಗಿ ನನ್ನ ಕಡೆಗೆ ಹೊರಳಿತು. ಹಾಸಿಗೆಯಲ್ಲಿ ಹರದಾಡುತ್ತಿರುವ ಗೆದ್ದಲು ಹುಳುಗಳು ಕಣ್ಣಿಗೆ ಬಿದ್ದುವೇನೋ! "ಅಯ್ಯಯ್ಯೋ! ಪಾಪ! ಇಲ್ಲಿ ನೋಡಿರಿ. ಶ್ರೀಕಂಠಭಟ್ಟರ ಮೈಗೆ ಗೆದ್ದಲು ಹತ್ತಿಬಿಟ್ಟಿದೆ" ಎಂದು ಮರುಕದಿಂದ ಕೂಗಿದನು. ಮೂರುನಾಲ್ಕು ಜನ ಬಂದು ನನ್ನನ್ನು ಸ್ಥಳಬಿಟ್ಟು ಕದಲಿಸಿದರು. ಮೈಗೆ ಹತ್ತಿದ್ದ ಗೆದ್ದಲನ್ನು ಕೈಯಿಂದ ಜಾಡಿಸಿ ತೆಗೆದರು. ಮೈದೊಗಲಿನ ಭಾಗವನ್ನೂ ಅಲ್ಲಲ್ಲಿ ತಿಂದಿದ್ದುವು. ನೋಡಿ ಎಲ್ಲರೂ ಮರಮರನೆ ಮರುಗಿದರು. "ಇಂತಹ ವೇಳೆ ಯಾರಿಗೂ ಬರಬಾರದಪ್ಪಾ!" ಎಂದು ನುಡಿದು, ಕಳವಳದ ಕಂಬನಿ ಸುರಿಸಿದರು. ಗೌಡರ ಅಪ್ಪಣೆಯಂತೆ ಒಬ್ಬನು ಹೋಗಿ, ಒಂದು ಹೊರೆ ಜೋಳದ ಕಣಿಕೆಯನ್ನು ತಂದ. ಗುಡಿಸಿಲ ನೆಲದಲ್ಲಿ ಸರಿಯಾಗಿ ಹರಡಿದ. ಅದರ ಮೇಲೆ ಹಾಸಿಗೆ ಹಾಸಿ, ನನ್ನನ್ನು ಎತ್ತಿ ಮಲಗಿಸಲಾಯಿತು. ಗೌಡರು ಒಬ್ಬಿಬ್ಬರನ್ನು ಅಲ್ಲಿಯೇ ಬಿಟ್ಟು, ಜೊತೆಗೆ ತಂದಿದ್ದ ದೀಪವನ್ನೂ ಗುಡಿಸಿಲಲ್ಲಿಟ್ಟು, ಅವಸರದಿಂದ ಹೊರಟು ಹೋದರು. ಅತ್ತು ಅತ್ತು ಹಣ್ಣಾದ ಹುಡುಗಿಯರು, ಬಳಲಿ ಬಿದ್ದುಕೊಂಡಿದ್ದರು. ಗೌಡರು ಮರಳಿ ಬಂದಾಗ ಬೆಳಗಿನ ಐದುಗಂಟೆಯಾಗಿರಬಹುದು. ಅವರ ಜೊತೆಗೆ ನಾಲ್ಕೈದು ಜನ ನಮ್ಮೂರ ಬ್ರಾಹ್ಮಣರೂ ಬಂದಿದ್ದರು. ತಂದೆಯ ಸ್ಮಶಾನಯಾತ್ರೆಯ ವಿಧಿಯೂ ನೆರವೇರಿತು.

ನನಗೆ ಪೂರ್ಣವಾಗಿ ಗುಣವಾಗಲಿಕ್ಕೆ ಮೂರು ತಿಂಗಳು ಬೇಕಾದುವು. ಅದುವರೆಗೆ ತಂದೆಯ ಉತ್ತರಕ್ರಿಯೆಯೂ ಇಲ್ಲ; ತಮ್ಮನ ಉತ್ತರಕ್ರಿಯೆಯೂ ಇಲ್ಲ. ಆಮೇಲೆ, ಹಾಗೆ ಹೀಗೆ ಮಾಡಿ ಕೊಂಚ ಹಣವನ್ನು ಸಂಪಾದಿಸಿಕೊಂಡು, ದತ್ತಾತ್ರೇಯ ಕ್ಷೇತ್ರಕ್ಕೆ ಹೋದೆ; ಆಪದ್ಧರ್ಮದ ಆಚಾರವಿಧಿಯಂತೆ ಇಬ್ಬರ ಉತ್ತರಕ್ರಿಯೆಯನ್ನೂ ತೀರಿಸಿದೆ. ಆದರೇನು! ನಮ್ಮೂರ ಬ್ರಾಹ್ಮಣಜನರಿಗಿದು ಸರಿಬೀಳಲಿಲ್ಲ. ನಮ್ಮೊಡನೆ ಬಳಕೆಯನ್ನು ಬಿಟ್ಟರು. ನಮ್ಮ ಹುಡುಗಿಯರು ನೀರಿಗೆ ಹೋದರೆ,ಬ್ರಾಹ್ಮಣರ ಹೆಂಗಸರು ಮುಟ್ಟಿ ಕೊಡವನ್ನು ಹೊರಿಸರು. ಶೂದ್ರರ ಮನೆಯ ರೊಟ್ಟಿಯನ್ನು ತಿಂದವರೆಂದು ಚುಚ್ಚಿ ಚುಚ್ಚಿ ಮಾತನಾಡುವರು. ದೊಡ್ಡವಳಿಗೆ ಈಗ ಹದಿನೈದು ವರ್ಷ. ಮದುವೆ ಮಾಡಬೇಕೆಂದರೆ, ವರಗಳೇ ದೊರೆಯದಂತೆ ವ್ಯವಸ್ಥೆಮಾಡಿ ಬಿಟ್ಟಿರುವರು. ವರದಕ್ಷಿಣೆ ಹೆಚ್ಚಾಗಿ ಕೊಟ್ಟರೆ, ಯಾರೂ ಮದುವೆಗೆ ಸಿದ್ಧರಾಗಬಹುದು; ಆದರೆ ಕೊಡುವುದಕ್ಕೆ ನನ್ನಲ್ಲಿ ಯೋಗ್ಯತೆಯಿಲ್ಲ.

ಈಗ ಮೂರು ತಿಂಗಳ ಕೆಳಗೆ ನಮ್ಮ ಶ್ರೀಗಳವರ ಮಠದಿಂದ ಕಾಗದವೊಂದು ಬಂದಿತು. ಅದರಲ್ಲಿ "(೧) ನೀನು ತಂದೆಯ ಮತ್ತು ತಮ್ಮನ ಉತ್ತರಕ್ರಿಯೆಯನ್ನು ವಿಧಿಪೂರ್ವಕವಾಗಿ ಮಾಡಿಲ್ಲ. (೨) ಶೂದ್ರರ ಕಡೆಯಿಂದ ಭೋಜನ ಮಾಡಿದ್ದ ಹುಡುಗಿಯರನ್ನು ಮನೆಯಲ್ಲಿಟ್ಟುಕೊಂಡು, ಅವರಿಗೆ ಪ್ರಾಯಶ್ಚಿತ್ತ ಕೊಡಿಸದೆ ಬಳಕೆಯನ್ನು ಮಾಡಿದ್ದೀಯೆ. (೩) ನಿಮ್ಮ ತಂಗಿ ಋತುಮತಿಯಾಗಿದ್ದರೂ ಇದುವರೆಗೆ ವಿವಾಹವನ್ನು ಮಾಡಿಕೊಟ್ಟಿಲ್ಲ. ಈ ಮೂರುಕಾರಣಗಳಿಂದ ನೀನು ನಮ್ಮ ಧರ್ಮಸಿಂಹಾಸನದಿಂದ ಬಹಿಷ್ಕೃತನಾಗಿದ್ದೀಯೆ. ಸನ್ನಿಧಿಗೆ ಬಂದು, ತಪ್ಪಿನ ಕಾಣಿಕೆ ಒಪ್ಪಿಸಿ, ಪ್ರಾಯಶ್ಚಿತ್ತ ತೆಗೆದುಕೊಳ್ಳುವವರೆಗೆ ನಿನ್ನ ಮನೆತನದ ಕೂಡ ಯಾರೂ ಅನ್ನೋದಕ ವ್ಯವಹಾರವನ್ನೂ ಶರೀರ ಸಂಬಂಧವನ್ನೂ ಮಾಡಲಾರರು " ಎಂಬ

ಅಭಿಪ್ರಾಯವಿದ್ದಿತು—ರಾಯರೇ! ತಪ್ಪುಗಾಣಿಕೆ ಎಷ್ಟೆಂದು ಬರೆದು ವಿಚಾರಿಸಿದೆ. "ಮುನ್ನೂರು ರೂಪಾಯಿ" ಎಂದು ಮಠದಿಂದ ಉತ್ತರ ಬಂದಿತು. ಎಲ್ಲಿಂದ ತರಲಿ ಸ್ವಾಮೀ,ಮುನ್ನೂರು ರೂಪಾಯಿ? "ಇದ್ದರೆ ಇರಲಿ ಬಹಿಷ್ಕಾರ! ನನಗೂ ಮದುವೆಯಾಗಿಲ್ಲ; ನನ್ನ ತಂಗಿಯರೂ ನನ್ನಂತೆಯೇ ಇದ್ದು ಬಿಡುವರು; ಆಯಿತು." ಎಂದು ನಿರಾಶೆಯಿಂದ ಸುಮ್ಮನೆ ಕುಳಿತುಬಿಟ್ಟೆನು. ಬಹಿಷ್ಕಾರದಿಂದ ನಾಗೇಶ್ವರ ದೇವರ ಪುಜಾರಿಕೆಯೂ ಹೋಗಿ ಬಿಟ್ಟಿತು. ವೈದಿಕವೃತ್ತಿಗೂ ಚಕ್ರ ಬಂತು. ಹೊಟ್ಟೆಗೇನು ಮಾಡುವುದು! ನಿಮ್ಮಂತಹ ನಾಲ್ಕುಜನ ಸ್ನೇಹಿತರ ಕೈಕಾಲು ಹಿಡಿದೆ. ಒಂದು ಐವತ್ತು ರೂಪಾಯಿ ಸಂಪಾದಿಸಿ, ಒಂದು ಹಳೆಯ ಹೊಲಿಗೆಯ ಯಂತ್ರವನ್ನು ಕೊಂಡು ತಂದೆ. ಈಗ ನಾನೂ ಹೊಲಿಯುತ್ತೇನೆ; ಹುಡುಗಿಯರಿಗೂ ತಕ್ಕ ಮಟ್ಟಿಗೆ ಕಲಿಸಿದ್ದೇನೆ. ಅದರಿಂದಲೇ ಹೊಟ್ಟೆತುಂಬಿಕೊಳ್ಳುತ್ತಲಿದ್ದೇನೆ. ಏನು ಮಾಡಬೇಕು ರಾಯರೇ! ಸುಮ್ಮನಿದ್ದರೆ ಹೊಟ್ಟೆ ಕೇಳುವುದೇ! ನೋಡಬೇಕು! 'ಏನಾದರೂ ಕೈಯಲ್ಲಿ ನಾಲ್ಕು ಕಾಸಾದರೆ, ಮಠದ ಕಾಣಿಕೆಕೊಟ್ಟು ಮುಂದೆ ಬಹಿಷ್ಕಾರ ತೆಗೆದುಹಾಕಿಸಿಕೊಳ್ಳಲಿಕ್ಕೆ ಬಂದೀತು' ಎಂದು ಇದ್ದುಬಿಟ್ಟಿದ್ದೇನೆ. ಇಷ್ಟು ನೋಡಿ ನನ್ನ ಕಥೆ.',

ಕೊನೆಯ ನಾಲ್ಕಾರು ಮಾತುಗಳನ್ನು ಹೇಳುತ್ತಿರುವಾಗ ಭಟ್ಟರ ಮುಖವು ತನ್ನ ಸ್ವಾಭಾವಿಕವಾದ ಕಿರುನಗೆಯನ್ನು ತಳೆದಿದ್ದಿತು. ಅವರ ಕತೆ ಮುಗಿದು ಆರೇಳು ನಿಮಿಷಗಳಾದರೂ, ನಾನು ದಂಗು ಬಡಿದು ಹಾಗೆಯೆ ಕುಳಿತಿದ್ದೆನು. ಹೃದಯವು ಮಾತ್ರ ಭಟ್ಟರಿಗಾಗಿ ತನ್ನಲ್ಲಿದ್ದಷ್ಟು ಮರುಕವನ್ನೆಲ್ಲ ಕೊಟ್ಟುಬಿಟ್ಟಿದ್ದಿತು. ಮನದಲ್ಲಿಯೇ ನಾನು ಯೋಚಿಸಿದೆ.

"ಅಯ್ಯನೂರ ಹೆಸರಿನ ಐತಿಹ್ಯಕ್ಕಾಗಿ ನಾನು ಅದೆಷ್ಟೋ ಪ್ರಯತ್ನಪಟ್ಟೆ. ಕಾಲು-ತಲೆ ಇಲ್ಲದ, ಅಂತಹ ಕತೆಗಳನ್ನು ಕಲೆಹಾಕು-

ವುದರಿಂದ ನಾಡಿಗೇನು ಹಿತ? ಭಟ್ಟರ ಕತೆಯಂತಹವುಗಳನ್ನು ಕೂಡಿಸಿ ಬರೆದು, ನಾಡಿನಜನರ ಮುಂದೆ ಇಟ್ಟರೆ, ಕೊಂಚ ಉಪಯೋಗವೇನಾದರೂ ಆದೀತು.”

* * * *

“ತಮಾಷೆ ನೋಡಿ; ಮುಡುಪೆಂದು ಬಂದ ದೇವರ ದುಡ್ಡನ್ನು ತಿಂದರೆ ಬಹಿಷ್ಕಾರವಿಲ್ಲ. ಸುಳ್ಳು ವೈದ್ಯಕಮಾಡಿ, ಹೊಟ್ಟೆತುಂಬಿಕೊಂಡರೆ ಬಹಿಷ್ಕಾರವಿಲ್ಲ. ವೈದಿಕವೃತ್ತಿಯೆಂದು ಸೋಮಾರಿತನಕ್ಕೆ ಆಳಾದರೆ ಬಹಿಷ್ಕಾರವಿಲ್ಲ. ಆಪತ್ತಿನಲ್ಲಿದ್ದವರಿಗೆ ನೆರವಾಗದಿದ್ದರೆ ಬಹಿಷ್ಕಾರವಿಲ್ಲ. ಅನಿವಾರ್ಯ ಪ್ರಸಂಗವು ಬಂದಾಗ ಒದಗಿದ-ತಪ್ಪಲ್ಲದ ತಪ್ಪಿಗೆ, ಅನೀತಿಯ ಸೋಂಕು ಇಲ್ಲದ ಅಪರಾಧಕ್ಕೆ, ಎಲ್ಲೆಲ್ಲಿಯೂ ಬಹಿಷ್ಕಾರ. ಈ ಬಹಿಷ್ಕಾರವು ಮಾನವನ ತಪ್ಪಿಗಾಗಿ ಅಲ್ಲ; ಅಪರಾಧಕ್ಕಾಗಿ ಅಲ್ಲ; ಆತನ ಬಡತನದ ಬಾಳಿಗಾಗಿ.



# ಹೊಟ್ಟೆಯ ಹೋರಾಟ

## ೧

ಈಗ ಇಪ್ಪತ್ತು ವರುಷಗಳ ಮೊದಲಿನ ಚಂದಮ್ಮನ ಬಾಳು, ಸಂನ್ಯಾಸಿಗಳಿಗೂ ಸಂಸಾರದ ಹುಚ್ಚನ್ನು ಹಿಡಿಸಿಬಿಡುವಂತಹುದು. ಚಂದಮ್ಮನಗಂಡ -ಶಿವಪ್ಪ- ಊರಲ್ಲಿ ಎಲ್ಲರಿಗೂ ಬೇಕಾದವನು. ಊರ ಹಿತದ ಯಾವ ಕೆಲಸದಲ್ಲಿಯೂ ಆತನ ಮುಖವು ಮುಂದೆ ತೋರುವದು. ಮನೆಯಲ್ಲಿ ನಾಲ್ಕೆತ್ತಿನ ಕಮತ; ಕೊಟ್ಟಿಗೆಯಲ್ಲಿ ಹಿಂಡುವ ಎಮ್ಮೆ, ಕರೆಯುವ ಹಸು, ಕಟ್ಟಿ ಮೇಯಿಸಿದ-ಕೊಬ್ಬಿದ ಹೋರಿಗಳೆರಡು. ಶಿವಪ್ಪನ ಮನೆಗೆ ಹೋಗಿ ನೋಡಬೇಕು! ಮುಂಬದಿಯಲ್ಲಿಯೇ ಇರುವ ಆ ದನಗಳ ಉಸಿರಾಟ, ಮೇವುತಿನ್ನುವಾಗಿನ ಬಾಯ ಸಪ್ಪಳ, ಹುರುಪಿನ ಹುಂಕಾರ, ವಾತ್ಸಲ್ಯದ ಅಂಭಾರವ ಇವೆಲ್ಲ ಸೇರಿ, ಆ ಸ್ಥಿರವಾದ ಮನೆಯು ಸಚೇತನವಾದಂತೆ ತೋರುವುದು. ಕಾಡುಕಲ್ಲುಗಳಿಂದ ಕಟ್ಟಿದ್ದ ಗೋಡೆಗಳು; ಗೋಡೆಗೆ ಸುಣ್ಣವಿಲ್ಲ, ಬಣ್ಣವಿಲ್ಲ; ಬರೀ ಕೆಮ್ಮಣ್ಣಿನ ಸಾರಣೆಯಿಂದ ಕೂಡಿರುವುದು. ಡೊಂಕು-ಡೊಂಕಾದ ಕಟ್ಟಿಗೆಯಿಂದ ಮಾಡಿದ ತೊಲೆ-ಜಂತಿ-ಕಂಬಗಳು. ಶಿಲ್ಪಸೌಂದರ್ಯವನ್ನಪೇಕ್ಷಿಸುವವರು ಆ ಮನೆಯನ್ನು ಕಂಡು ಮೂಗುಮುರಿಯದಿರರು. ಆದರೆ, ಅಲ್ಲಲ್ಲಿ ಮಂಚಿಕೆಗಳ ಮೇಲೆ ಸಾಲುಸಾಲಾಗಿರಿಸಿದ್ದ- ಕಾಳು ತುಂಬಿದ ಚೀಲಗಳೂ, ಗಳಗೆ-ಕಣಜುಗಳೂ, ಬುಟ್ಟಿ-ಮಂಕರಿಗಳೂ, ಅಡಕಿಲಗಡಿಗೆಗಳೂ ಬಹುಜನರ ಕಣ್ಣುಮನಗಳನ್ನು ಸೆಳೆಯುತ್ತಿದ್ದುವು. ಚಂದಮ್ಮನ ಈಗಿನ ಅಭಿಪ್ರಾಯ

ದಂತೆ ಆಗಿನದು ಸತ್ಯಯುಗ; ಏತಕ್ಕೆಂದರೆ ಕಾಲಕಾಲಕ್ಕೆ ಮಳೆಯಹಾಗು ತ್ತಿದ್ದಿತು; ಭೂಮಿ ಹುಲುಸಾಗಿ ಬೆಳೆಯುತ್ತಿದ್ದಿತು. ಚಂದಮ್ಮನ ಸತ್ಯಯುಗದ ವ್ಯಾಖ್ಯೆಯೆಂದರೆ, ಜನರೆಲ್ಲರೂ ಉಂಡುಕೊಂಡು ಸೌಖ್ಯವಾಗಿ ಬದುಕಿಕೊಂಡಿದ್ದ ಕಾಲ– ಎಂದಿಷ್ಟೇ.

ಶಿವಪ್ಪ ಊರಕಾರಭಾರದಲ್ಲಿ–ನಿರ್ವಾಹವಿಲ್ಲದೆ- ಮನಸ್ಸು ಹಾಕುತ್ತಿದ್ದನಾದರೂ, ತನ್ನ ಕರ್ತವ್ಯವಾದ ಭೂಮಿತಾಯಿಯ ಸೇವೆಯಲ್ಲಿ ಮಾತ್ರ, ಯಾವ ಬಗೆಯ ಕುಂದುಕೊರತೆಗಳನ್ನೂ ತಂದು ಕೊಳ್ಳುತ್ತಿರಲಿಲ್ಲ. ಸೂರ್ಯ–ಚಂದ್ರರಂತೆ ಉಚಿತವಾದ ಕೆಲಸನ್ನು ಉಚಿತವಾದ ಸಮಯಕ್ಕೆ ಮಾಡಿಯೇ ತೀರುವನು. ತನ್ನ ಹಳ್ಳಿ ಯನ್ನು ಬಿಟ್ಟು ಇನ್ನೊಂದು ಹಳ್ಳಿಯ ಮುಖ ನೋಡಿದವನಲ್ಲವಾ ದರೂ, ಶಿವಪ್ಪ ಪಂಚನಾಗಿ ಊರವರ ವ್ಯಾಜ್ಯಗಳನ್ನು ತೀರಿಸತೊಡ ಗಿದನೆಂದರೆ, ಆಗಿನ ಆತನ ನೈಪುಣ್ಯಕ್ಕೆ ಮಾತಿನ ಚಾತುರಿಗೆ ಎಂತೆಂತ ವರೂ ಬೆರಗುಗೊಳ್ಳುತ್ತಿದ್ದರು. ಗಂಡಹೆಂಡಿರಿಬ್ಬರೂ ಕೊಡುವಕೈ. ಆದರೇನು ! ಆಗಿನ ಕಾಲದಲ್ಲಿ 'ಬೇಡುವವರ ಬೇನೆ' 'ತಿರುಕರ ಪಿಡುಗು' ಇದ್ದಿಲ್ಲವೇನೊ! ಶಿವಪ್ಪನ ಮನೆಯಲ್ಲಿ ಎರಡೆರಡು ವರುಷದ ಕಾಳು ಹುಳಿಯುತ್ತ ಬಿದ್ದಿರುವುದು; ಮೂರುಮೂರು ದಿನದ ಮೊಸರು–ಮಜ್ಜಿಗೆ ಕೊಳೆಯುತ್ತ ಕುಳಿತಿರುವುದು. 'ನಿಮ್ಮ ಮನೇಲಿ ಹಳೆಜೋಳ ಹುಳಿಮಜ್ಜಿಗೆ ಹೆಚ್ಚಾಗಲಮ್ಮಾ !" ಎಂದು ಹರಕೆ ಕೊಡುತ್ತ ಕೂಗುತಿರುವ ತಿರುಪೆಯವರ ಕೂಗನ್ನು ಹಲವು ಜನರು ಕೇಳಿರಬಹುದು. ಅವರ ಈ ಹರಕೆಯ ನುಡಿ, ತುಂಬ ಹುರುಳಿನಿಂದ ಕೂಡಿದೆ ನೋಡಿ! ಬ್ರಾಹ್ಮಣರು ತಮ್ಮ ಕರ್ಮಾಂತ್ಯದಲ್ಲಿ ದಿನವೂ ಹೇಳುತ್ತಿರುವ "ಕಾಲೇವರ್ಷತು ಪರ್ಜನ್ಯಃ ಪ್ರುಥಿವೀಸ್ಯಾತ್ ಸಸ್ಯ ಶಾಲಿನೀ" ಎಂಬ ಸಂಸ್ಕೃತ ಮಂತ್ರದ ಅಭಿಪ್ರಾಯವನ್ನೇ ಈ ಕನ್ನಡ ಮಂತ್ರವು ಒಳಗೊಂಡಿರುವುದು. ಇರಲಿ ಈ ಮಾತು ! ಶಿವಪ್ಪನ ಮನೆಯ ಹಳೆಜೋಳ ಹುಳಿಮಜ್ಜಿಗೆಗಳು ಕಾಡಿನಲ್ಲರಳಿದ ಮಲ್ಲಿಗೆ

ಯಂತೆ, ವಿನಿಯೋಗಕ್ಕೆಡೆಯಿಲ್ಲದೆ ನಿಷ್ಪ್ರಯೋಜಕವಾಗಿ ಪರಿಣಮಿ
ಸಿದ್ದುವು. ಎಲ್ಲರ ಹೊಟ್ಟೆಯೂ ತುಂಬಿರುವಾಗ ಬೇಡುವವರಾರು ?
ನೀಡುವವರು ಏತಕ್ಕೆ ? ಹಸಿವೆಯ ರಕ್ಕಸನ ಆಡಳಿತದಲ್ಲಿಯೇ ಬೇಡು
ವವರ ಬಳಗ ಹೆಚ್ಚುವುದು; ನೀಡುವವರ ಅವಶ್ಯಕತೆಯುಂಟಾಗುವುದು.

ಶಿವಪ್ಪ, ಚಂದಮ್ಮ ದಾಂಪತ್ಯಜೀವನದಲ್ಲಿ ಅದಾಗಲೇ ಅಡಿ
ಯಿಟ್ಟವರು. ಅವರ ಸುಸಂಸ್ಕೃತವಲ್ಲದ, ಹಳ್ಳಿಗರ ಒಲುಮೆಯ ಆಟ-
ನೋಟಗಳು, ಮಾತು-ಕತೆಗಳು, ಇವೆಲ್ಲ ಸಂಸ್ಕಾರಯುತರ ಪ್ರಣಯ
ಕೇಲಿ-ಪ್ರೇಮಾಲಾಪಗಳಷ್ಟೇ ಆ ಗಂಡಹೆಂಡಿರ ಹೃದಯವನ್ನು ಅರಳಿ
ಸುತ್ತಿದ್ದುವು. ನೋಡಿ! ಒಂದೇಜಾತಿಯ ಇಮ್ಮಾವಿನ ಮರಗಳೆರಡು.
ಒಂದಕ್ಕೆ ಓದುಬರೆಹ ಬಾರದ ಹಳ್ಳಿಗನೊಬ್ಬನು, ತನ್ನೂರಿನ ಕುಂಬಾ
ರನು ಮಾಡಿದ ಮಣ್ಣಮಡಕೆಯಿಂದ ನೀರೆರೆಯುತ್ತಾನೆ. ಮತ್ತೊಂ
ದಕ್ಕೆ, ಕಲಿತು ಪದವಿಯನ್ನು ಪಡೆದವನೊಬ್ಬನು ಸೀಮೆಯಿಂದ
ಬಂದಿದ್ದ ಬಣ್ಣದ "ಟಿನ್ ಪಾಟ್" ನಿಂದ ನೀರೆರೆಯುತ್ತಾನೆ. ಆದರೆ
ಆ ಎರಡು ಗಿಡಗಳೂ ಒಂದೇಬಗೆಯ ಫಲಗಳನ್ನು ಬಿಡುವುವು. ತಿಂದು
ನೋಡಿದರೆ, ಇಬ್ಬರಿಗೂ ಒಂದೇವಿಧದ ರುಚಿಯನ್ನು ಕೊಡುವುವು;
ಹಳ್ಳಿಗರೇನು ? ನಾಗರಿಕರೇನು ? ದಾಂಪತ್ಯಪ್ರೇಮದ ಫಲವಾದ
ಹೃದಯದ ಹಿಗ್ಗು ಇಬ್ಬರಿಗೂ ಸಮಾನವಾಗಿರುವುದು.

ಒಮ್ಮೆ ಒಂದು ತಮಾಷೆ ನಡೆಯಿತು. ಶಿವಪ್ಪ ನಮ್ಮ ಕೆರೆಯ
ಹೊಲವನ್ನು ಮಾಡಿದ್ದ. ಹಿಂದೆ ಮುಂದೆ ಬೆಳೆಯದಷ್ಟು ಅಸಲ
ಬಿಳಿಜೋಳ ಬೆಳೆದಿದ್ದಿತು. ಹೊಲದಲ್ಲಿ ರಾಶಿನಡೆದಿದ್ದಿತು. ಆಗ
ನಾನಿನ್ನೂ ಚಿಕ್ಕವನು. ಹನ್ನೆರಡುವರುಷದ ವಯಸ್ಸು. ರಾಶಿಯನ್ನು
ನೋಡುವ ಆಶೆಯಿಂದ ಹೊಲಕ್ಕೆ ಹೋಗಿದ್ದೆ. ಕಣದ ಬಳಿಯ
ಗುಡಿಸಿಲಲ್ಲಿ-ಹೊರಗಿನದೆಲ್ಲವೂ ಕಾಣುವಂತೆ ಕುಳಿತುಕೊಂಡಿದ್ದೆ.
ಕೂಲಿಯಾಳುಗಳೆಲ್ಲರೂ ಮನೆಯ ಕಡೆಗೇನೋ ಹೋಗಿದ್ದರು. ಶಿವಪ್ಪ

ನೊಬ್ಬನೆ ಕಣದ ಮಧ್ಯದ ರಾಶಿಯ ಕಡೆಗೆ ನೋಡುತ್ತ, ಕಾವ್ಯವ್ರತ ವನ್ನು ಮಾಡಿದ್ದ ಪ್ರತಿಯು ಫಲವನ್ನು ಪಡೆದಾಗಿನಂತಹ ಆನಂದ ವನ್ನು ಅನುಭವಿಸುತ್ತ, ಒಂದು ಪಕ್ಕಕ್ಕೆ ಕುಳಿತಿದ್ದನು. ಏರಿಕೆಯ ಸೂರ್ಯನ ಕಿರಣಗಳು, ಜೋಳದ ರಾಶಿಗೆ ಮುತ್ತಿನ ರಾಶಿಯ ಮೆರುಗನ್ನು ತಂದಿದ್ದುವು. ಇದ್ದಕ್ಕಿದ್ದ ಹಾಗೆಯೆ ಶಿವಪ್ಪ, ಊರ ದಾರಿಯ ಕಡೆಗೆ ದೂರದೃಷ್ಟಿಯನ್ನಿಟ್ಟು, ನಿಟ್ಟಿಸಿ ನೋಡಲುತೊಡಗಿದ. ಮನಸ್ಸಿನಲ್ಲಿ ಏನೇನು ಭಾವಿಸುತ್ತಿದ್ದನೋ ತಿಳಿಯೆ. ಹೃದಯ ತುಂಬಿ ಹೆಚ್ಚಾಗಿ ಬರುತ್ತಿರುವ ನಗೆಯನ್ನು ಒತ್ತಾಯದಿಂದ ಒತ್ತಿ ಒತ್ತಿ ಹಿಡಿಯುತ್ತಿದ್ದ. ಬರಬರುತ್ತ ಹೃದಯದ ಹಿಗ್ಗು ಮುಖದಲ್ಲಿ ಮೂಡಲುತೊಡಗಿತು. ಬಾಯಿ ತಾನಾಗಿಯೇ ಒಳಗಿನ ಮಾತನ್ನು ಹಾಡಿನ ಮುಖಾಂತರ ಹೊರಕ್ಕೆಹಾಕಿತು.

"ನಾರೀ! ನಿನ್ನ ಽ ಕಣ್ಣಿನ ಕಿರಣಾ
ಕಾರಿದ್ಹಾಂಗ ಽ ಬಿರುಸು ಬಾಣಾ
ಹಾರಿದ್ಹಾಂಗ ಽ ಮಿಲಟರಿ ಗುಂಡಾ!
ನಿನಗಿಂತಾ ಚಲುವೀ
ಯಾರಿಲ್ಲ ಽ ಈ ಮರ್ತ್ಯದೊಳಗ ಽ
ಬೆರಗಾದೀನೇಳೇ !
ಬೆರಗಾದೀನೇಳೆ ನಿನಗಾಗಿ ಎಲೆ ಹುಡುಗಿ
ಹರುಷಗೊಂಡೀನಿ ಮನದೊಳಗ"||

ಶಿವಪ್ಪನ ಆಗಿನ ಹಾವಭಾವದ ಅರ್ಥ, ಹಾಡಿದ ಹಾಡಿನ ಔಚಿತ್ಯ, ನನಗೆ ಕೊಂಚವೂ ಗೊತ್ತಾಗಲಿಲ್ಲ. ಆತನ ಮುಗುಳುನಗೆಗೆ ಕಾರಣವೇನೆಂಬುದೂ ನನಗೆ ತಿಳಿಯಲಿಲ್ಲ. ತಿಳಿದುಕೊಳ್ಳಲಿಕ್ಕೆ ನಾನಾ ಗಿಯೆ ಪ್ರಯತ್ನವನ್ನೂ ಮಾಡಲಿಲ್ಲವೆನ್ನಿ ! ಶಿವಪ್ಪನು ತೀರ ಅಸ್ಥಿರ ನಾಗಿಬಿಟ್ಟ. ಕಿರುನಗೆಯ ಮೊಗದವನಾಗಿ ನೆಟ್ಟನೋಟದಿಂದ ಅದೇನನ್ನೋ ನೋಡುತ್ತ ಎದ್ದು ನಿಂತುಕೊಂಡ. 'ಇಷ್ಟೊಂದು

ಆತುರದಿಂದ ಈತನು ನೋಡುವುದಾದರೂ ಏನು!' ಎಂಬ ಯೋಚನೆ ನನ್ನ ಮನದಲ್ಲಿ ಮೂಡುತ್ತಿರುವಾಗಲೇ" ಗೌಡರS ಗೌಡರS! ಒಂದೀಟ ಇಲ್ಲಿ ಬರ್ರಿ! ಗಡಾನ ಬರ್ರಿ!" ಎಂದು ಶಿವಪ್ಪ ನನ್ನನ್ನು ಕೂಗಿದ.

"ಏನಪ್ಪಾ! ಇಷ್ಟೊಂದು ಅವಸರದ ಕೆಲಸ!" ಎಂದು ನುಡಿಯುತ್ತಲೆ ಎದ್ದು ನಾನು ಹೊರಕ್ಕೆ ಹೋದೆ. ಶಿವಪ್ಪ ಉಲ್ಲಸಿತಭಾವದಿಂದ, ನಗೆಯಾಟದ ಮಾತಿನಿಂದ ಹೇಳಿದ.

"ಯಪ್ಪಾ! ಈ ವರಸ ನಮ್ಮ ರಾಶಿ ಮಾತ್ರ ಬಲು ಹುಲುಸು ಆಗತೈತಿ ನೋಡ್ರಿ!"

"ಅದು ಹೇಗೋ ಶಿವಪ್ಪಾ?"

"ಕಾಣೂದಿಲ್ಲರೇ! ಹುಲುಸಿನ ದೇವ್ತಿ, ಹೆಜ್ಜೀ ಹಾಕ್ತಾ ಹಾಕ್ತಾ ನಮ್ಮ ಕಣದ ಕಡೇನS ಬರಲಾಕ ಹತ್ತೀದಾಳು. ಅಲ್ಲಿ ನೋಡ್ರಿ ಅಲ್ಲಿ." ಶಿವಪ್ಪ ಕೈಮಾಡಿ ತೋರಿಸಿದ.

ನಾನು ಬೆರಗುಗೊಂಡ ನೋಟದಿಂದ ದಾರಿಯ ಕಡೆಗೆ ನೋಡಿದೆ. ಚಂದಮ್ಮ ತಲೆಯ ಮೇಲೆ ಬುಟ್ಟಿಯನ್ನು ಹೊತ್ತುಕೊಂಡು ನಮ್ಮ ಕಡೆಗೆ ಬರುತ್ತಲಿದ್ದಳು. ರಾಶಿಯ ದೇವತೆಗೆ ನೈವೇದ್ಯವನ್ನು ತೆಗೆದುಕೊಂಡು ಬಂದಿದ್ದಳು.

ಅಂದು ಚಂದಮ್ಮ ಉಟ್ಟುದು ಹಬ್ಬದ ಹೊಸಸೀರೆ. ಕಾಡಿಗೆಯ ಬಣ್ಣ; ಇಕ್ಕಡೆಗೂ ಗೇಣಗಲದ ರೇಶಿಮೆಯ ಅಂಚು. ತಲೆಯನ್ನು ಬಳಸಿಕೊಂಡು ಬೆನ್ನ ಹಿಂದೆ ಅಲೆದಾಡುತಿರುವ, ಒಂದುವರೆ ಮೊಳದುದ್ದದ-ಮಿರುಗುರೇಶಿಮೆಯ ಸೆರಗು. ತೊಟ್ಟಿದ್ದ ಕುಪ್ಪಸ ಗಿಳಿಯ ಬಣ್ಣದ್ದು; ತುಂಬಿದ ಮೈಯನ್ನು ಒತ್ತಾಗಿ ಹೊಂದಿಕೊಂಡು, ಬಿಸಿಲಿಗೆ ಮಿರಿಮಿರಿ ಮಿಂಚುತ್ತಿದ್ದಿತು. ಪುಷ್ಟವಾದ ನಳಿತೋಳಿನಲ್ಲಿ ಅಚ್ಚ ಬೆಳ್ಳಿಯ-ಬೆಳಗಿದ ತೋಳಬಂದಿಗೆ. ಕೊರಳಲ್ಲಿಯೂ ದಿನಕ್ಕಿಂತ ಒಂದೆರಡು ಹೆಚ್ಚಿಗೆ ತೊಡವುಗಳು. ತಲೆಗೂದಲನ್ನು ಬಾಚಿ, ಬೈತಲು ತೆಗೆದು

ಕಟ್ಟಿದ್ದರೂ,ಸುರುಳಿ-ಸುರುಳಿಯಾದ ಮುಂಗುರುಳು ಸೆರಗಿನ ಹೊರಕ್ಕೆ ಬಂದು, ಹಣೆಯ ಸುತ್ತಲೂ ನಿಂದು, ಮುಖದ ಚೆಲುವನ್ನು ಹೆಚ್ಚಿಸುತ್ತಿದ್ದುವು. ದುಂಡನೆಯ ತುಂಬುಮೊಗ. ಸಂಪಿಗೆಯೆಸಳಿನ ಮೈಬಣ್ಣ. ಬಿಸಿಲಲ್ಲಿ ನಡೆದು ಬಂದುದರಿಂದ ಕಣ್ಣುಗಳು ಕೆಂಪೇರಿದ್ದುವು. ಹವಳ-ದುಟಿಯ ಮೇಲೆ ಮೆಲುನಗೆಯು ನಲಿಯುತ್ತಿದ್ದಿತು. ಬಲಗೈಯ ದುಂಡುದೋಳನ್ನು ಮೇಲಕ್ಕೆತ್ತಿ ತಲೆಯ ಬುಟ್ಟಿಯನ್ನು ಹಿಡಿದಿದ್ದಳು. ಕಾಲಲ್ಲಿಯ ಗೆಜ್ಜೆಪಿಲ್ಲೆಗಳು ಆಡಿಗಡಿಗೆ ಧ್ವನಿ ಮಾಡುತ್ತಿರಲು, ಆದೊಂದು ಗತ್ತಿನ ನಡಿಗೆಯಿಂದ ಚಂದಮ್ಮ ನಾವಿರುವ ಎಡೆಯನ್ನು ಬಳಿಸಾರಿದಳು.

ನಾನು ಹುಡುಗತನದ ನಗೆನಗುತ್ತ ಕೇಳಿದೆ "ಹುಲುಸಿನ ದೇವತೆ ಎಲ್ಲಿದ್ದಾಳೋ ಶಿವಪ್ಪಾ?"

ಶಿವಪ್ಪ ನನಗೆ ಮರುನುಡಿಯನ್ನೇನೂ ಕೊಡಲಿಲ್ಲ. ಕಣದ ಬಳಿಯಲ್ಲಿ ಬಂದುನಿಂತ ಚಂದಮ್ಮನ ಮುಂದೆ, ಉದ್ದಕ್ಕೆ-ನೆಲಕ್ಕೆ ಹಣೆ ಹಚ್ಚಿ ಬಿದ್ದುಕೊಂಡ. 'ಇದೇನು?' ಎಂದು ನಾನು ಬೆರಗು ನೋಟದಿಂದ ನೋಡುತ್ತ ಸುಮ್ಮನೆ ನಿಂತುಬಿಟ್ಟೆ. ಶಿವಪ್ಪ ಚೇಷ್ಟೆಯ ಸ್ವರದಲ್ಲಿ ಮಾತನಾಡತೊಡಗಿದ."ದೇವೀ! ಮಾದೇವೀ! ನನ್ನ ರಾಶಿಗೆ ಹುಲುಸು ಕೊಡು ತಾಯೀ! ನಿನಗೆ ಅಮಾಸಿಗೊಮ್ಮೆ ಕಾಯಿ ಒಡಸತೇನಿ. ಪರಸಕ್ಕೊಮ್ಮೆ ಕರಿಗಡಬು,ಅಕ್ಕೀಬಾನ ನೇವದೀಮಾಡತೇನಿ."

ಚಂದಮ್ಮ ಗಂಡನ ಹುಡುಗಾಟವನ್ನು ಕಂಡಳು. ನಗೆಯ ಮುಗುಳು ಅರಳಾಯಿತು. ನನ್ನನ್ನು ನೋಡಿದಳು. ನಾಚಿಕೆಯಿಂದ ಮುಖವು ಸಂಜೆಯ ಬಾನ ಬಣ್ಣಕ್ಕೆ ತಿರುಗಿತು. ಹೊಳಪಿನ ನೆಳೆಗದಿರುಗಳನ್ನು ಸೂಸುತ್ತಿರುವ ಕಣ್ಣುಗಳು ನೆಲವನ್ನು ನೋಡಲು ತೊಡಗಿದುವು. ಒಯ್ಯಾರದಿಂದ ಕತ್ತನ್ನು ಒಲೆದಾಡಿಸುತ್ತ, ಹುಸಿ ಮುನಿಸನ್ನು ತಂದುಕೆಡು, ಮೆಲುನುಡಿಯಿಂದ ಮಾತನಾಡಿದಳು. "ಇದೇನಿದು! ಹುಚ್ಚುಚ್ಚಾಟ!"

ಆಗಿನ ಚಂದಮ್ಮನ ನಿಂತ ನಿಲುವು, ಮೊಗದಬಗೆ, ಶಿವಪ್ಪನ ನಿಂತುಕೊಂಡಿದ್ದ ಆ ಭಂಗಿ, ನಿಜವಾಗಿಯೂ ನನ್ನ ಅಂದಿನ ಎಳಸಾದ ಹೃದಯವನ್ನೂ ಆಕರ್ಷಿಸಿದುವು. ವೈಯಸವಿರನ್ನು ನಿಲ್ಲಿಸಿದುವು. ನನಗೆ ಚಿತ್ರಕಲೆ ಬರುತ್ತಿದ್ದರೆ, ನಿಶ್ಚಯವಾಗಿಯೂ ಅಂದಿನ ಆ ದೃಶ್ಯ ವನ್ನು ಚಿತ್ರಿಸಿ, 'ಹಳ್ಳಿಯ ಹುಚ್ಚು ಪ್ರಣಯ' ಎಂದು ಹೆಸರಿಟ್ಟು ಜನರ ಕಣ್ಣೆದುರಿಗೆ ತರುತ್ತಿದ್ದೆ. ಆದರೆ ಮಾಡುವುದೇನು ! ಬಡಿಗೆ ಯನ್ನು ಚಿತ್ರಿಸಬೇಕೆಂದು ಮನಸ್ಸಿನಲ್ಲಿದ್ದರೆ, ಬಿಲ್ಲಿನ ಚಿತ್ರ ಬರೆಯು ವುದು ನನ್ನ ಕೈ. ಶಿವಪ್ಪನ ಹುಲುಸಿನ ದೇವತೆಯ ಕಲ್ಪನೆಯು ಅಂದು ನನಗೆ ಸರಿಯಾಗಿ ಆಗದಿದ್ದರೂ, ಇಂದು ಅದರ ಔಚಿತ್ಯವು ಚೆನ್ನಾಗಿ ಕಂಡುಬಂದಿದೆ.

ಆ ದಿನ ನಾನು ಅಲ್ಲಿ ಇರದಿದ್ದರೆ, ಆ ಭಕ್ತ ತನ್ನ ದೇವಿಗೆ ಉಚಿತವಾದ ನೈವೇದ್ಯವನ್ನು ಒಪ್ಪಿಸುತ್ತಿದ್ದನೇನೊ ! ದೇವಿಯೂ ಆತನ ಭಕ್ತಿಗೆ ಮೆಚ್ಚಿ, ತನ್ನ ವರಪ್ರಸಾದವನ್ನು ಕರುಣೆಯಿಂದ ಕೊಡುತ್ತಿದ್ದಳೇನೋ ! ಅಂತೂ ಅವರಿಬ್ಬರ ದೈವಭಕ್ತಿ, ಭಕ್ತವಾತ್ಸಲ್ಯ ಗಳ ಹೊನಲುಗಳಿಗೆ ನಾನೊಂದು ಅಡ್ಡಕಟ್ಟೆಯಾಗಿ ಪರಿಣಮಿಸಿದೆ.

ಚಂದಮ್ಮ–ಶಿವಪ್ಪರ ಬಾಳುವೆಯಲ್ಲಿ ಇಂತಹ ಒಲವಿನ ಸವಿ ಯಾಟಗಳು ಅದೆಷ್ಟು ನಡೆಯುತ್ತಿದ್ದುವೊ ! ಮಾದರಿಗಾಗಿ ನನ್ನ ಕಣ್ಣಿಗೆ ಬಿದ್ದುದೊಂದನ್ನು ನನ್ನ ಅಪೂರ್ಣವಾದ - ಅಸಮರ್ಥವಾದ ಭಾಷೆಯಲ್ಲಿ ಹೇಳಿದ್ದೇನೆ – ಇಷ್ಟೇ. ಹೆಚ್ಚಿಗೇನು ಹೇಳುವುದು? ಚಂದಮ್ಮನ ಬಾಳು ಸಂನ್ಯಾಸಿಗಳಿಗೂ ಸಂಸಾರದ ಹುಚ್ಚುಹಚ್ಚು ವಂತಹದೆಂದು ಮೊದಲೇ ಹೇಳಿದ್ದೇನಲ್ಲವೇ !

ಚಂದಮ್ಮ ನಮ್ಮ ರೈತಗಿತ್ತಿ. ಅಲ್ಲದೆ ನಮ್ಮ ತಾಯಿಗೆ ತುಂಬ ಬೇಕಾದವಳು. ಆಗಾಗ ನಮ್ಮ ಮನೆಗೆ ಬರುವಳು. ಮಾತುಕತೆ ಯಾಡುತ್ತ ಕುಳಿತುಕೊಳ್ಳುವಳು. ನಮ್ಮ ಮನೆಯವರನ್ನೆಲ್ಲ, ಆಕೆ ತನ್ನ ಬಳಗವನ್ನಾಗಿ ಭಾವಿಸಿದ್ದಳು.

# ಹೊಟ್ಟೆಯ ಹೋರಾಟ

## ೨

ಶಿಕ್ಷಣದ ಸಲುವಾಗಿ ಚಿಕ್ಕತನದಲ್ಲಿಯೇ, ನಮ್ಮ ಹಳ್ಳಿಗೆ ನನಗೆ ವಿಯೋಗವಾಯಿತು. ನನಗಾಗಿ ಪಟ್ಟಣದಲ್ಲಿ ಮನೆಯನ್ನೇ ಮಾಡಬೇಕಾಗಿ ಬಂದುದರಿಂದ, ಬಿಡುವಿನಲ್ಲಿ ಕೂಡ ನಮ್ಮ ಹಳ್ಳಿಯ ಕಡೆಗೆ ಹೋಗುವ ಕಾರಣ ನನಗೆ ಉಳಿಯಲಿಲ್ಲ. ನಮ್ಮ ಅಣ್ಣನವರು ಮಾತ್ರ ವರುಷಕ್ಕೊಮ್ಮೆ ಅಲ್ಲಿಗೆ ಹೋಗುವರು. ಭೂಮಿ ಬೆಳೆದಿರಲಿ, ಬೆಳೆಯದಿರಲಿ ; ಯಾವುದನ್ನೂ ವಿಚಾರಿಸದೆ, ಇಲ್ಲದ ಹೆದರಿಕೆ ಬೆದರಿಕೆಗಳನ್ನು ಹಾಕಿ, ರೈತರಿಂದ ಕಂದಾಯ " ವಸೂಲ್ " ಮಾಡಿಕೊಂಡು ಬರುತ್ತಿದ್ದರು. ಮರಳಿ ಬರುವಾಗ "ಈ ಸಲ ಬೆಳೆ ಚೆನ್ನಾಗಿ ಬಂದಿಲ್ಲ. ಪಾಪ ! ರೈತರು ಬಲು ಹಣ್ಣಾಗಿದ್ದಾರೆ" ಎಂದು ಮರುಗುತ್ತಲೆ ಮನೆಗೆ ಬರುವರು. ಆದರೆ ಬರತಕ್ಕ ಹಣದಲ್ಲಿ ಒಂದು ರೂಪಾಯಿಯನ್ನು ಕೂಡ ಬಿಟ್ಟು ಬಂದಿರುತ್ತಿರಲಿಲ್ಲ. ರೈತರ ಕಷ್ಟವನ್ನು ನೋಡಿ ಏನಾದರೂ ಸ್ವಲ್ಪ ಬಿಡಬೇಕೆಂದು ಅವರಿಗೇನು ಎನಿಸುತ್ತಿರಲಿಲ್ಲವೆಂತಲ್ಲ. ಆದರೇನು ! ರೈತರ ಕಷ್ಟ ಕಡಿಮೆ ಮಾಡಬೇಕೆಂದರೆ, ಪಟ್ಟಣದಲ್ಲಿರುವ ನಮ್ಮ ಕಷ್ಟ ಹೆಚ್ಚುತ್ತಿದ್ದಿತು. ತಾವು ಕಷ್ಟವನ್ನು ಸಹಿಸಿ, ಇನ್ನೊಬ್ಬರ ಕಷ್ಟವನ್ನು ಕಳೆಯುವುದು ನಮ್ಮಂತಹ ಸಂಸಾರಿಕರಿಗೆ ಹೇಗೆ ಸಾಧ್ಯವಾಗಬೇಕು ನೋಡಿ !

ಪಟ್ಟಣದಲ್ಲಿರುತ್ತಿದ್ದರೂ ನನಗೆ ನಮ್ಮ ಹಳ್ಳಿಯ ನೆನಪು ಆಗಾಗ ಆಗುತ್ತಿದ್ದಿತು. ನಮ್ಮೂರ ಹೆಸರನ್ನು ಯಾರಾದರೂ ಉಚ್ಚರಿಸಿದರೆ, ನನ್ನ ಕಿವಿಗಳು ನಿಮಿರಿ ನಿಲ್ಲುವವು. ಮೈಯಲ್ಲಿ ವಿದ್ಯುತ್‌ಸಂಚಾರವಾದಂತಾಗುವುದು. ಊರ ಹೆಸರನ್ನು ಉಚ್ಚರಿಸಿದವರು ನಮ್ಮವರೆಂಬ ಭಾವನೆಯುಂಟಾಗುವುದು. ಹಳ್ಳಿಯಲ್ಲಿ ಕಳೆದ ನನ್ನ ಎಳೆಯತನದ ಉಲ್ಲಾಸದ ಕಾಲವು, ಅಡಿಗಡಿಗೆ ನನ್ನ ಮನಸ್ಸನ್ನು ಅಸ್ಥಿರಗೊಳಿಸುವುದು.

ನಮ್ಮ ಹಳ್ಳಿಯ ಪಕ್ಕದಲ್ಲಿಯೆ ತಿಳಿನೀರಿನ ತೊರೆಯೊಂದು ಹನ್ನೆರಡು ತಿಂಗಳೂ ಹರಿಯುತ್ತಿರುವುದು. ತೊರೆಯ ಆಕಡೆಯ ತಡಿಯ ಮೇಲೆ ಮಾವಿನ ತೋಪು. ಅಲ್ಲಿಯ ಕಪಿಗಳಿಗೆ ಅಣಕಿಸುತ್ತ ಜಿಗಿದಾಡಿದ ಅಂದಿನ ಆನಂದ, ಅದೆಷ್ಟು ನಾಟಕ–ಸಿನೆಮಾಗಳನ್ನು ನೋಡಿದರೂ ಸಿಕ್ಕದಂತಹದು. ಕುರುಬರು ತಮ್ಮ ಕುರಿಯ ಹಿಂಡಿಗೆ ನೀರು ಕುಡಿಸುವಾಗ ನುಡಿಸುತಿದ್ದ, ಕೊಳಲುಲಿಯನ್ನು ಕೇಳಿ ತಣಿದ ಕಿವಿಗೆ–ತೂಗಿದ ತಲೆಗೆ, ಎಂತೆಂತಹ ಸಂಗೀತಾಚಾರ್ಯರ ರಾಗಾಲಾಪನೆಗಳೂ ಸವಿಯಾಗಿ ತೋರವು. ನಮ್ಮೂರಿನ ಸಂಜೆ ! ಅಹಹಾ ! ಅದೆಂತಹ ಸೊಬಗಿನ ಸಂಜೆ ! ಸೂರ್ಯ ನಮ್ಮ ಹಳ್ಳಿಯ ಮೇಲೆಲ್ಲ ಚಿಂಬೊನ್ನ ಹುಡಿಯನ್ನು ತಳಿದು, ತನ್ನ ಕೌಶಲವನ್ನು ತಾನೇ ನೋಡುತ್ತ, ಪಡುವಲಿನ ಕಿರುಬೆಟ್ಟದ ಮೇಲೆ ಕುಳಿತಿಹುವನು. ತೊರೆಯ ಮರಳಿನಲ್ಲಿ ಚೆಂಗುಚೆಂಗೆಂದು ಹಾರಾಡುತ್ತಿರುವ ನಮ್ಮ ಗೆಳೆಯರ ಬಳಗವನ್ನೂ ಆಗಾಗ ಆಶೆಯಿಂದ ಇಣುಕಿಣುಕಿ ನೋಡುತ್ತಿರುವನು. ತೊರೆಯ ತಿಳಿವೊನಲು, ಕಿವಿಗೆ ಸವಿಯಾದ–ಅಂತರಂಗಕ್ಕೆ ಮಾತ್ರ ಅದಾವುದೋ ಅರ್ಥವನ್ನು ಹೊಳೆಯಿಸುವ ಸ್ವರ್ಗೀಯಗೀತವನ್ನು ಹಾಡುತ್ತ ಹಾಡುತ್ತ ಮುಂದುವರಿಯುತ್ತಿರುವುದು. ಅಲ್ಲಿಯ ತಿಳಿನೀರನ್ನು ಸೋಲಿಸುವ ತಿಳಿಮನದಿಂದ ಕೂಡಿದ ಹಳ್ಳಿಯ ಗರತಿಯರು, ಗುಂಪುಗುಂಪಾಗಿ ನೀರಿಗೆಂದು ಬಂದು, ತಮ್ಮ ಕಣ್ಣಹೊಳಪನ್ನು ಹರಡಿ, ನಗೆಯ ಮಲ್ಲಿಗೆಯನ್ನು ಸುರಿಸಿ, ಸಂಜೆಯ ಸೊಬಗಿಗೆ ಒಪ್ಪವಿಡುತಿರುವರು. ತೋಪಿನ ಕಪಿಗಳು ಹಲ್ಲುಕಿರಿದು ಅಣಕಿಸಿ, ಕಣ್ಣುಮಿಟುಕಿಸಿ, ಬಂದ ಹೆಂಗಸರನ್ನು ಹೆದರಿಸುವವು. ತೊರೆಯ ನೀರಿನ ಮೊರೆತ, ದನಕರಗಳ ಕೂಗು, ತೋಪಿನ ಹಕ್ಕಿಗಳ ಕಿಲಬಿಲಿ, ಆಡುವ ಹುಡುಗರ ಕಲಕಲ, ನೀರಿಗೆ ಬಂದವರ ಸೊಲ್ಲುಗುಲ್ಲು, ಇವೆಲ್ಲವುಗಳ ಬೆರಕೆ

ಯಿಂದುಂಟಾದ ಅದೊಂದು ಮಿಶ್ರಧ್ವನಿಯು, ನಮ್ಮ ಹಳ್ಳಿಯು ಮಾಡುತಿರುವ ಸಂಜೆಯ ಸೂರ್ಯನ ಪ್ರಾರ್ಥನೆಯ ಧ್ವನಿಯೇನೋ ಎಂದೆನಿಸುವುದು. ಇತ್ತಡಿಯ ತೋಟದಲ್ಲಿಯ ಬೇಸಗೆಯ ಮಲ್ಲಿಗೆಗಳು ಅರಳಿದ್ದರಂತೂ ತೀರಿಯೆ ಹೋಯಿತು. ತಂಗಾಳಿ ಅಂಚೆಯಾಳಾಗಿ ಎಲ್ಲರ ಮೂಗಿಗೂ ಅದರ ವರ್ತಮಾನವನ್ನು ತಿಳುಹಿಸುತ್ತ ಸುತ್ತು ತಿರುವುದು. ನಮ್ಮೂರ ಸಂಜೆಯಂತಹ ಸಂಜೆಯನ್ನು ಪಟ್ಟಣದಲ್ಲಿ ಇದುವರೆಗೆ ನಾನು ನೋಡಿಯೇ ಇಲ್ಲ.

ನಮ್ಮ ಹಳ್ಳಿಯನ್ನು ಮತ್ತೆ ಮತ್ತೆ ನೋಡಬೇಕೆಂದು ಮನಸ್ಸಿನ ಆತುರ; ಆದರೆ ನನ್ನ ವಿದ್ಯಾರ್ಥಿಜೀವನದಲ್ಲಿ ಒಂದು ಸಲವೂ ಹೋಗುವುದಾಗಲಿಲ್ಲ. ತರುವಾಯ ನನ್ನ ಈ ಸರಕಾರೀ ಉದ್ಯೋಗಕ್ಕೆ ಪ್ರಾರಂಭವಾಯಿತು. ಈ ನಾಲ್ಕೈದು ವರುಷದ ಅವಧಿಯಲ್ಲಿ, ಬೊಂಬಾಯಿ ನೋಡಿದೆ; ಮದರಾಸು ನೋಡಿದೆ; ಮೈಸೂರು-ಬೆಂಗಳೂರುಗಳನ್ನು ಕಂಡುಬಂದೆ; ಇನ್ನೂ ಎಲ್ಲೆಲ್ಲಿಯೊ ಸುತ್ತಿಬಂದೆ; ಆದರೆ ನಮ್ಮ ಹಳ್ಳಿಗೆ ಹೋಗುವುದಕ್ಕೇನೂ ಅವಕಾಶ ಸಿಕ್ಕಲಿಲ್ಲ. ಕಳೆದ ಕ್ರಿಸ್‌ಮಸ್ ರಜೆಯಲ್ಲಿ - ಎಲ್ಲ ಕೆಲಸಗಳನ್ನೂ ಒತ್ತಿಟ್ಟು - ಮನೆಯವರನ್ನೆಲ್ಲ ಕರೆದುಕೊಂಡು ನಮ್ಮೂರಿಗೆ ಹೋಗಿದ್ದೆ. ನಾನು ಹುಟ್ಟಿ ಬಳೆದ ನಮ್ಮ ಮಾಳಿಗೆಯ ಮನೆ ನೋಡಿ ಹೆಮ್ಮೆಪಟ್ಟೆ. ಜಟ್ಟಿಯಂತೆ ಗೀರುಗಂಧವನ್ನು ಹಚ್ಚಿಕೊಂಡು, ಹೊನ್ನವರೆಯ (ತಂಗಡಿ) ಹೂವಿನಿಂದ ಪೂಜೆಗೊಂಡಿದ್ದ ದೇವಾಲಯದ ಹನುಮಂತರಾಯನ ದರ್ಶನ ತೆಗೆದುಕೊಂಡು, ಭಕ್ತಿಯಿಂದ ಕಣ್ಣುಮುಚ್ಚಿ ವಂದಿಸಿದೆ. ಚಿಕ್ಕತನದಲ್ಲಿ ಜಿಗಿದು ಜಿಗಿದು ಹೊಡೆದಿದ್ದ ಗುಡಿಯ ಗಂಟೆಯನ್ನು ಸಹಜವಾಗಿ ನಿಂತುಕೊಂಡೇ ಬಾರಿಸಿ, "ಅದೆಷ್ಟು ಎತ್ತರನಾಗಿದ್ದೇನಲ್ಲ ಈಗ!" ಎಂದು ಬೆರಗುಗೊಂಡೆ. ತಿಳಿನೀರಿನ ಪ್ರವಾಹವೆಲ್ಲ ಬರತು ಹೋಗಿದ್ದ ತೊರೆಯನ್ನು ನೋಡಿ ಕಳವಳಿಸಿದೆ. ಮಾವಿನ

ತೋಪಿನ-ಅಂದಿನ ಸೊಬಗು ಇಂದೆ ಉಳಿದಿರಲಿಲ್ಲವಾದರೂ, ಕೋತಿಗಳ ಸಿನೇಮಾ-ಸರ್ಕಸ್‌ಗಳು ಮಾತ್ರ ಎಂದಿನಂತೆಯೇ ಇದ್ದುವು. ನೋಡಿ ನಕ್ಕು ನಲಿದಾಡಿದೆ. ಚಿಕ್ಕತನದಲ್ಲಿ ಮೇಲೆಹತ್ತಿ ಕುಣಿದಾಡಿದ ಮಾವು - ಬೇವುಗಳ ಮರಗಳನ್ನು ಕಂಡು, ಬಹುದಿನ ಅಗಲಿದ ಬಂಧು ಗಳನ್ನು ಮರಳಿ ಕಂಡಂತೆ ಆನಂದವನ್ನು ಅನುಭವಿಸಿದೆ. ಕೆರೆಯ ಹೊಲಕ್ಕೂ ಹೋಗಿದ್ದೆ. ಆದರೆ ಈಗ ಆ ಹೊಲಮಾಡಿದವನು ಶಿವಪ್ಪನಲ್ಲ! ಇನ್ನೊಬ್ಬನಾವನೋ ಒಕ್ಕಲಿಗ. ಶಿವಪ್ಪನ ಮರಣ ವಾರ್ತೆಯನ್ನು ಕೇಳಿ,ಮನಸ್ಸು ಮರಮರ ಮರುಗಿತಾದರೂ, ತಿನ್ನುವ ಬೆಳಸಿಯಲ್ಲಿ ನಾನೇನು ಕಡಿಮೆ ಮಾಡಲಿಲ್ಲ. ಸತ್ತವರಿಗಾಗಿ ಮರುಗು ವುದೂ ಮನುಷ್ಯರ ಧರ್ಮ; ಬದುಕಿರುವುದಕ್ಕಾಗಿ ತಿನ್ನುವುದೂ ಮನುಷ್ಯರ ಧರ್ಮ. ನಾನೂ ಮನುಷ್ಯನೇ ಅಲ್ಲವೇ ?

ಹಿಂದೆ ನಾನು ನೋಡುತಿದ್ದಾಗ ಕೆರೆಯ ಹೊಲ ಬೆಳೆಯುತ್ತಿದ್ದಿ ತಲ್ಲ! ಅದರಲ್ಲಿ ಕಾಲುಪಾಲಿನಷ್ಟು ಕೂಡ ಈಗ ಬೆಳೆದಿರಲಿಲ್ಲ. ಹಿಂದೆ ಶಿವಪ್ಪ ಮಾಡುತ್ತಿದ್ದ ರಾಶಿ, ಆತನ ಪುಲುಕಿಸ ದೇವತೆ, ಎಲ್ಲವೂ ಆಗ ನನ್ನ ಕಣ್ಣ ಮುಂದೆ ಕುಣಿದು ಕುಣಿದು ಹೋದುವು.

ನಮ್ಮ ಹಳ್ಳಿಗೆ ಹೋದ ಮೂರನೆಯ ದಿನದ ಇಳಿಹೊತ್ತು. ನಾನು ಮಲಗಿಕೊಂಡಿದ್ದ ಕಿರುಮನೆಯನ್ನು ಬಿಟ್ಟು, ಮುಖತೊಳೆದು ಕೊಳ್ಳಲಿಕ್ಕೆಂದು ಒಳಕ್ಕೆ ಹೋದೆ. ನಡುಮನೆಯಲ್ಲಿ ನಮ್ಮ ತಾಯಿ, ಯಾವಳೋ ಒಬ್ಬ ಹಳ್ಳಿಯ ಹೆಂಗಸಿನ ಕೂಡ ಮಾತನಾಡುತ್ತ ಕುಳಿತಿ ದ್ದಳು. ನಾನು ಹಾಗೆಯೇ ಬಚ್ಚಲುಮನೆಗೆ ಹೋಗಿ, ಕೈಕಾಲು ಮುಖ ತೊಳೆದುಕೊಂಡೆ. ಹೊರಕ್ಕೆ ತಿರುಗಾಡಲಿಕ್ಕೆ ಹೋಗಬೇಕೆಂಬ ಆತುರದಿಂದ, ತಾಯಿಯ ಜೊತೆಯಲ್ಲಿ ಮಾತನಾಡುತ್ತಿದ್ದವಳು ಯಾರೆಂಬುದರ ವಿಚಾರವನ್ನು ಮಾಡದೆ, ಮತ್ತೆ ನನ್ನ ಕಿರುಮನೆಯ ಕಡೆಗೆ ತಿರುಗಿದೆ. ಹೋಗುತಿರುವಾಗ ನಮ್ಮ ತಾಯಿ ಮಾತನಾಡಿದಳು

"ಯಾಕೋ ಕಿಟ್ಟಾ! ನಿನಗೆ ಚಂದಮ್ಮನ ಗುರುತು ಸಿಕ್ಕಲಿಲ್ಲ ವೇನೋ!"

ಹೋಗುತ್ತಿದ್ದ ಹಾಗೆಯೆ ನಿಂತುಬಿಟ್ಟೆ. ಕುಳಿತಿದ್ದ ಹೆಂಗಸನ್ನು ಗುರುತು ಹಿಡಿಯುವ ನೋಟದಿಂದ ನೋಡಿಯೇ ನೋಡಿದೆ. ನಮ್ಮ ತಾಯಿ ಮತ್ತೆ ನುಡಿದಳು. "ನನಗೂ ಚಂದಮ್ಮನ ಗುರುತು ಒಮ್ಮೆಲೇ ಸಿಕ್ಕಲಿಲ್ಲ ನೋಡಪ್ಪಾ! ಪಾಪ, ಹೇಗಾಗಿ ಬಿಟ್ಟಿದ್ದಾಳೆ ನೋಡು."

ಚಂದಮ್ಮನ ಮುಸಮುಸಕು ಗುರುತು ನನಗೆ ಸಿಕ್ಕಿತು. ಆಕೆಯ ಅಂಚುಹರಿದ–ಸೆರಗು ಇಲ್ಲದ ಸೀರೆ, ತೇಪೆಹಚ್ಚಿದ ಕುಪ್ಪಸ, ಮಾಸಿ ಕೆಂಬಣ್ಣಕ್ಕಿಳಿದ ತಲೆಗೂದಲು, ಸೊರಗಿದ ಮೈ. ಬಾಡಿದ ಸಂಪಗೆ ಯಂತಿದ್ದ ಮೈಬಣ್ಣ, ತಗ್ಗುಬಿದ್ದ ಗಲ್ಲಗಳು, ನೀರಸವಾಗಿದ್ದ – ಗುಳಿ ಬಿದ್ದ ಕಣ್ಣುಗಳು ಇವೆಲ್ಲ ಚೆಂದಮ್ಮನ ಮೊದಲಿನ ರೂಪವನ್ನೆಲ್ಲ ಮರೆ ಯಿಸಿಬಿಟ್ಟಿದ್ದುವು. ಆಕೆಯ ದೇಹವು ಹೊತ್ತ ಚೆಲುವಿನ ಹೊದಿಕೆ ಹಾವಿನ ಪರೆಯಂತೆ ಬಿಚ್ಚಿಹೋಗಿ, ಆಕೆಗೆ ಈ ಹೊಸಬಗೆಯ ರೂಪನ್ನು ಒದಗಿಸಿದೆಯೇನೋ—ಎನ್ನಿಸುವಂತಿದ್ದಿತು. ನಮ್ಮ ತಾಯಿಯ ಎದುರು ಆಕೆ ಅತ್ತಿದ್ದಳೇನೋ! ಸುರಿದ ಕಣ್ಣೀರ ಕಲೆಯು ಕಣ್ಣ ಬಳಿಯಲ್ಲಿದ್ದಿತು. ನಾನು ಆಕೆಯನ್ನು ನೋಡುತಿರುವಾಗ, ಚಂದಮ್ಮ ಕಳವಳವನ್ನು ಸೂಸುವ ಕಣ್ಣುಗಳಿಂದ–ವಿಷಾದದ ಒತ್ತಾ ಯದ ಕಿರುನಗೆಮೊಗದಿಂದ ನನ್ನನ್ನು ನೋಡುತ್ತಿದ್ದಳು. ನಾನು ಚಂದಮ್ಮನನ್ನು ನೋಡಿಯೇ ನೋಡಿದೆ. ಹಿಂದಕ್ಕೆ ಒಂದುಸಲ ನೋಡಿದ ಹುಲುಸಿನ ದೇವತೆಯ ಜೊತೆಗೆ ಇಂದಿನ ಚಂದಮ್ಮನನ್ನು ನಿಲ್ಲಿಸಿ, ಎರಡೂ ಚಿತ್ರಗಳ ಅಂತರವನ್ನು ವಿಮರ್ಶೆಮಾಡಿನೋಡಿದೆ. ಇದ್ದಕ್ಕಿದ್ದಹಾಗೆಯೆ ನನ್ನ ಬಾಯಿಂದ ಮಾತೊಂದು ಹೊರಟಿತು.

"ಏನು! ಚಂದಮ್ಮ ಹೀಗಾಗಿ ಬಿಟ್ಟಿದ್ದಾಳೆ! ನನಗೆ ಒಮ್ಮೆಲೆ ಗುರುತೇ ಸಿಕ್ಕಲಿಲ್ಲ!"

ಚಂದವ್ಮ್ಮ ಬಿಸಿಯುಸಿರಿನೊಂದಿಗೆ ಮಾತನಾಡಿದಳು. "ಯಪ್ಪಾ! ಚಂದವ್ಮ್ಮನ ಬಾಳೇ ಎಲ್ಲಾ ಚಂದ ಆಗೇತಿ. ನನ್ನ ದೈವಾ ಏನ ಹೇಳಿಲಿ ಗೌಡರs!" ಮಾತಿನೊಡನೆಯೆ ಕಣ್ಣೀರು ಸುರಿದುವು.

"ಶಿವಪ್ಪ ಸತ್ತುಹೋದದ್ದು ಕೇಳಿ ನನಗೂ ಬಲು ವ್ಯಸನ ವಾಯಿತು ನೋಡು ಚಂದವ್ಮಾ! ಏನು ಮಾಡುವುದದೆ! ಸಾಯು ವುದು–ಹುಟ್ಟುವುದು ಯಾರ ಕೈಯೊಳಗಿನದೇ!" ನಾನು ಕನಿಕರದ ದನಿಯಲ್ಲಿ ನುಡಿದೆ.

"ಸತ್ತವರು ಸತ್ತುಹೋದರು. ಇದ್ದವರನ್ನಾದರೂ ಮಾದೇವ ಸುಕದಿಂದ ಇಡಬಾರದs, ಯಪ್ಪಾ! ಚಂದವ್ಮ್ಮ ಬಿಗಿದು ಬರುತ್ತಿರುವ ಕಂಠದಿಂದ ಹೇಳಿದಳು.

"ಮತ್ತೇನಾಯಿತಮ್ಮಾ! ಮನೆಯಲ್ಲಿ ಉಳಿದ ಜನರೆಲ್ಲ ಒಳಿತಾಗಿ ಇದ್ದಾರೆ ತಾನೇ?" ನಾನು ಕುತುಹಲದ ದನಿಯಲ್ಲಿ ಕೇಳಿದೆ.

"ಏನು ಒಳತೋ ಏನು ಕೆಡಕೋ! ಎಲ್ಲರೂ ಬದುಕಿಕೊಂಡು ಮಾತ್ರ ಇದ್ದೀವಿ ನೋಡ್ರಿ. ನೀವು ಸಣ್ಣವರಿದ್ದಾಗ ನನ್ನ ಸಂಸಾರದ ಸಡಗರಾ ನೋಡಿದ್ರಿ. ಯಪ್ಪಾ! ನಮ್ಮ ಹಾಲಿನ ಹರಿವ್ಯಾಗೆಲ್ಲಾ ಉಪ್ಪುಗೂಡಿ ಹೋಗಿಬಿಟ್ಟೈತಿ"

"ಅಂತಹ ಪ್ರಸಂಗವೇನಮ್ಮಾ ನಿನಗೆ ಬಂದದ್ದು?"

ಮರುಕ ಬೆರೆತ ದನಿಯಲ್ಲಿ ನಮ್ಮ ತಾಯಿ ಹೇಳಿದಳು. "ಪಾಪ! ಚಂದವ್ಮ್ಮ ಕಷ್ಟದ ಕಿಚ್ಚಿನಲ್ಲಿ ಬಿದ್ದು ಬೆಂದುಹೋಗಿದ್ದಾಳೆ ನೋಡು. ತನ್ನ ಬದುಕಿನ ಕರುಣಕಥೆಯನ್ನೇ ನನ್ನ ಮುಂದೆ ತೋಡಿಕೊಳ್ಳುತ್ತಿದ್ದಾಳೆ."

ಚಂದವ್ಮ್ಮನ ಚರಿತ್ರೆಯನ್ನು ನನಗೂ ಕೇಳಬೇಕೆಂದೆನ್ನಿಸಿತು. ಹೊರಕ್ಕೆ ಹೋಗುವ ವಿಚಾರವನ್ನು ತಡೆಹಿಡಿದು ನಾನೂ ಅಲ್ಲಿಯೇ ಕುಳಿತುಬಿಟ್ಟೆ.

ನಾನು ಇಷ್ಟು ಕಲಿತವನಾದರೂ ನನ್ನ ತಾಯಿಗೆ ನಾನು ಮಮತೆಯ ಮಗನೇ. ಅಲ್ಲದೆ ಎಳೆಯತನದಲ್ಲಿ ಕಳೆದ ನನ್ನ ಹಳ್ಳಿಯ ಆಯುಷ್ಯವು, ಇಲ್ಲದ ಹುಚ್ಚು ಹುಚ್ಚು ಹೆಮ್ಮೆ-ಹಮ್ಮುಗಳಿಗೆ ನನ್ನ ಹೃದಯವನ್ನು ಸೋಂಕಗೊಟ್ಟಿಲ್ಲ. ಎಂತಲೇ ಯಾವ ಯೋಚನೆಯನ್ನೂ ಮಾಡದೆ ಚಿಕ್ಕತನದಲ್ಲಿ ತಾಯಿಯ ಬಳಿ, ಚಂದಮ್ಮನ ಬಳಿ ಕುಳಿತಿರುತ್ತಿದ್ದಂತೆಯೇ ಇಂದೂ ಕುಳಿತುಕೊಂಡೆ.

ತಾಯಿಯ ಕಡೆಗೊಮ್ಮೆ, ನನ್ನ ಕಡೆಗೊಮ್ಮೆ ತನ್ನ ದೈನ್ಯ ದೃಷ್ಟಿಗಳನ್ನು ಹೊರಳಿಸುತ್ತ, ಎಡಗೈಯ ಅಂಗುಷ್ಠ-ತರ್ಜನಿಯ ಬೆರಳುಗಳಿಂದ ಕಂಬನಿಗಳನ್ನು ಮಿಡಿಯುತ್ತ ಚಂದಮ್ಮ ಮಾತನಾಡಲು ತೊಡಗಿದಳು.

“ಯಪ್ಪಾ! ಅಂವಾ ಸಾಯೂತನಕಾ ನಮಗ ದುಕ್ಕಾ ಅಂದರ ಏನೇಸೂ ಗೊತ್ತಿದ್ದಿಲ್ಲ. ಆಮ್ಯಾಲ ಕಣ್ಣೀರು ಕೂಳು ಕೂಡೇ ತಿನ್ನೋದು ಒಂದು ದಿನಾಸೂ ತಪ್ಪಿಲ್ಲ. ಒಂದರ ಹಿಂದ ಒಂದು ಬರೂ ದಿನಾ ಎಲ್ಲಾ ಕೈಯಾಗ ಕೊಳ್ಳೀ ಹಿಡುಕೊಂಡs ಬರತಾವು. ನನ್ನ ಎದೀಗೆ ಕೊಳ್ಳೀ ಚುಚ್ಚತಾವು. ಯಪ್ಪಾ! ಕಲಿಕಾಲ ಹೆಚ್ಚಿತೇನೋ! ವರಸ ವರಸಕ್ಕೂ ಮಳೀ ಕಡಿಮೇ! ಮಳೀ ಇಲ್ಲದಮ್ಯಾಗ ಬೆಳೀ ಅರೆ ಹ್ಯಾಂಗ ಬರಬೇಕು? ಮನ್ಯಾಗ ನೀಗಿಸಿಕೊಂಡು ಹೋಗಾವನs ಹೋದ;ಅಂತ ಮಾಡಿದ ಹೊಲಾನೆಲ್ಲಾ ಬಿಟ್ಟುಬಿಟ್ಟಿವಿ. ನಮ್ಮ ದೀರೋದು ಒಂದುಕೂರಿಗಿ ಹೊಲಾ. ಅವರಿಗೆ ಇವರಿಗೆ ಜಾಯಿತಗದೋ,ಬಾಡಿಗೀ ಕೊಟ್ಟೋ ಹೊಲಾ ಬಿತ್ತಿಸಿಕೊಳತಿದ್ದೆ. ಆದರೇನು! ಮಳಿರಾಯ ಮಕಾತೋರಿಸದs ಬಿತ್ತಿದ ಬೀಜಾಸೂ ಮಣ್ಣಾಗೂಡಸತಿದ್ದ. ಏನು ಮಾಡೋದು ಯಪ್ಪಾ! ಸಣ್ಣ ಸಣ್ಣ ಮಕ್ಕಳು; ದುಡೀಲಿಕ್ಕೆ ಹ್ಯಾಂಗ ಹೋದಾವು. ಏನೇನೋ ಮನೇಲಿದ್ದದ್ದನ್ನೆಲ್ಲಾ ಮುರಿಸಿ ಇಲ್ಲೀತನಕಾ ಕಾಲಾನೂಕತಾ ಬಂದಿವಿ. ನನಗ ಬದುಕಿ

ಇರೂದಕ್ಕs ಬೇಜಾರು; ಆದರ ಯಪ್ಪಾ! ಸಣ್ಣಸಣ್ಣ ಎರಡೂ ಮಕ್ಕಳು,ಸಾಯೋದಕ್ಕ ನನಗ ದೊಡ್ಡ ಅಡ್ಡೀಯಾಗಿಬಿಟ್ಟೂ. ನಾನೂ ಸತ್ತುಹೋದರ ಮಕ್ಕಳ ಗತಿ ಏನು?" ಅಂಬೋಮಾತು ನನ್ನ ಸಾಯೋ ಆಶೇನ ತಡಿದು ಹಿಡೀತು. ಏನೋ, ಹೊಳ್ಯಾಗ ಹರಿಗೊಂಡು ಹೋಗಾಂವಗ ಮರದ ತುಂಡೊಂದು ಆಧಾರಕ್ಕ ಸಿಕ್ಯಾಂಗ, ನನ್ನ ಮಕ್ಕಳ ಮಾರೀನೋಡಿ, ನಡುನಡಕs ಸೊಲ್ಪ ಸಮಾಧಾನಪಟು ಕೋತಿದ್ದೆ. ಬಂದ ಕಷ್ಟಾನೆಲ್ಲಾ ತಾಳಿಕೊಂಡು ಇಲ್ಲೀತನಕಾ ದಿವಸಾ ನೂಕಿದೆ. ಈಗ ಮಕ್ಕಳು ದೊಡ್ಡವರಾಗಿ ನನ್ನುದ್ದ ಬೆಳೆದಿದ್ದಾರೆಪ್ಪಾ! ದೊಡ್ಡವಗ ಹತ್ತೊಂಬತ್ತು ವರಸ, ಸಣ್ಣವಗ ಹದಿನೇಳು ವರಸ. ದುಡದು ತಮ್ಮ ಹೊಟ್ಟೀ ತುಂಬಿಕೊಳ್ಳೂಹಾಂಗ ಆಗೀದಾರು. ಆದರ ಏನು ಮಾಡೂದು; ನಮ್ಮ ಬಡತನ ಈಗೇನೂ ನಸೀದಾಗ ನಮ್ಮ ಕೈ ಬಿಡೂಹಾಂಗ ಕಾಣವಲ್ಲದರಿ. ಮಳೀ ಈ ನಾಡನ್ನ ಮರತು ಬಿಟ್ಟಾಂಗs ಕಾಣತೈತಿ. ನಮ್ಮ ಹೊಲಾ ಬೆಳೀದಿದ್ದರ ಇಲ್ಲ; ಮಂದೀ ಹೊಲಾ ಆದ್ರೂ ಬೆಳದು, ಕೂಲೀ ಕುಂಬಳೀ ಮಾಡಿ ಹೊಟ್ಟೀತುಂಬಿ ಕೊಂಡೇವು ಅಂದ್ರ, ಎಲ್ಲಾರ ಬಾಳೇವೂ ಒಂದs ಸವನಾಗಿ ಆಗ್ಯೆತಿ. ಬೆಳೀ ಇಲ್ಲ, ಕೂಲಿ ಇಲ್ಲ, ಹೊಟ್ಟೆಗೇನು ಹೇಳೋದು ರಾಯರs!

ನಿಮಗ ಗೊತ್ತಿಲ್ಲೇನು? ನಮ್ಮ ಮನ್ಯಾಗ ನಾಕುನಾಕು ವರಸದ ಹಳೆಗಾಳು ಹಾಂಗs ಬಿದ್ದಾಡತಿದ್ದೂ; ಹಾಲುಹಯನದಾ ಗಂತೂ ನಮ್ಮ ಮನಿ ತೇಲ್ಯಾಡತಿತ್ತು. ಈಗ ಒಂದು ಸೆರಿಮುಕ್ಕು ಮಜ್ಜಿಗಿ ಕೂಡ ಸಿಗವೊಲ್ಲದು. ಮಕ್ಕಳಕೈಯಾಗ ಒಣಾರೊಟ್ಟೀ ಕೊಡಬೇಕಾದರ ನನಗ ಹ್ಯಾಂಗಾಗತೈತಿ ಅಂದ್ರೀ! ಹೊಟ್ಯಾಗ ಇರಿವೀ ಹುತ್ತ ಬೆಳದೈತೇನೋ ಅಂತ ಅನಸತೈತಿ. ಆ ಒಣಾರೊಟ್ಟಿ ಹಸೀ ಆಗಬೇಕಾದರ, ನನ್ನ ಕಣ್ಣೀರಿಂದsನs ಆಗಬೇಕು. ಇಲ್ಲದಿದ್ದರ ಮಕ್ಕಳ ಎಂಜಲದಿಂದ ಆಗಬೇಕು.

ಸರಕಾರದವರೇನೋ ಮದಿವೀ ಸಲುವಾಗಿ ಕಾಯಿದೇ ಮಾಡಿದ್ದಾರಂತಲ್ರಿ! ಅದಕ್ಕಾಗಿ ಹೋದ ಬ್ಯಾಸಿಗ್ಯಾಗ ನಮ್ಮೂರಾಗ ಮದುವೀದೊಂದು ಸುಗ್ಗೀನಽ ಎದ್ದು ಬಿಟ್ಟಿತು. ಇದ್ದವರಿಗೇನು ಯಪ್ಪಾ! ಬರಾ ಆಗಲಿ, ಅರಾ ಆಗಲಿ! ಮದುವಿ, ಮುಂಜಿ, ಎಲ್ಲಾನೂ ಸುಸೂತ್ರ ನಾಗತಾವು. ಅಡಚಣೀ ಅಂಬೂವೆಲ್ಲಾ ನಮ್ಮಂತಾ ಬಡವರಿಗಾಗೇ ಭೂಮೀಮ್ಯಾಗ ಹುಟ್ಟಿಬಂದಾವು. ಆಂವ ಇದ್ದಾಗಽ ಮಕ್ಕಳಿಗೆ ಹೆಣ್ಣು ಗೊತ್ತುಮಾಡೇ ಇಟ್ಟಿದ್ದ. ನಿಮ್ಮಂತೆ ಬೆಳಸಿ ಮದುವೀ ಮಾಡವರರೇ ನಾವು! ತೊಟ್ಟಿಲಕ್ಕಽ ಬಾಸಿಂಗಾ ಕಟ್ಟಿಬಿಡವರು. ಹೆಣ್ಣು ಗಟ್ಟಿಮಾಡಿದ್ದ. ಮದುವೀ ಮಾಡಬೇಕು, ಮಾಡಬೇಕು— ಅಂತಿರುವಾಗಽ ಹೊರಟುಹೋಗಿಬಿಟ್ಟ. ನಾನು ನನ್ನ ಬಡತಾನಾನೂ ಬದೀಗೊತ್ತಿ, ವರಸಾ ವರಸಾ ಕೊಡಬೇಕಾದ ದಂಡಿ-ಕುಬಸಾ ಕೊಟ್ಟು ಮುಗಿಸಿಬಿಟ್ಟಿದ್ದೆ. ಬ್ಯಾಗನಽ ಮದುವೀ ಮಾಡಬೇಕಂದರ ಚಲೂ ದಿನಾನಽ ಬಂದಿದ್ದಿಲ್ಲ. ಊರೊಳಗೆಲ್ಲ ಮದುವೀ ಸುಗ್ಗಿ ಎದ್ದದ್ದನ್ನ ಹೆಣ್ಣಿನ ತಾಯೀತಂದೀ ನೋಡಿದರು. "ನೀನೂ ಇದಽವರಸ ಮದುವೀ ಮಾಡಿಬಿಡತಿದ್ದರ ಮಾಡಿಬಿಡು. ಇಲ್ಲದಿದ್ದರ ಇನ್ನ ಹದಿನಾರು ವರಸ ಆಗೂತನಕಾ, ನಮ್ಮ ಮಕ್ಕಳನ್ನ ಹಾಂಗಽ ಬಿಡಾಕೇನೂ ನಮಗ ಮನಸಿಲ್ಲ. ನಿನಗ ಈ ವರಸ ಆಗದಿದ್ದರ, ನಾವು ಬ್ಯಾರೇಕಡೆ ಮನೀ ನೋಡಿ, ಮದುವೀಮಾಡಿಕೊಡತೀವಿ." ಅಂತ ಬಂದಽನವನಽ ನನ್ನ ಬೆನ್ನಹತ್ತಿದರು. ಈ ಹೆಣ್ಣು ಹೋದರ ನನ್ನ ಮಕ್ಕಳು ಬ್ಯಾಗ ಮದುವೀನಽ ಕಾಣೂಹಾಂಗ ಇರಲಿಲ್ಲ ಯಪ್ಪಾ! ಈಗಽ ಮಾಡಿಬಿಡಬೇಕಂದರ ಕೈಯಾಗ ಒಂದು ಕಾಸು ಇಲ್ಲ; ಮನ್ಯಾಗ ಕೊಳಿವಿ ಕಾಳಿಲ್ಲ; ಏನ ಮಾಡಬೇಕಂಬೂದು ನನಗ ತಿಳೀದ್ಹಾಂಗಾತು. ಅಮಾಸೀ ಕತ್ತಲು ಬಂದು, ಸುತ್ತೆಲ್ಲಾ ಮುಸುಕಿದ್ಹಾಂಗಾತು.

ಮಾಡಿದ್ದರ ಎಂಟು ದಿನದ ಒಳಗಽ ಮದುವೀ ಮಾಡಿ ಬಿಡ

ಬೇಕಾಗಿತ್ತು. ಸಾಲಾನಾದರೂ ಕೇಳಬೇಕಂದರ ಈ ಹಳ್ಳ್ಯಾಗ ಯಾರನ್ನ ಕೇಳಬೇಕು ! ಬೇರೂರ ಸಾವಕಾರನ್ನ ನೋಡಬೇಕಂದರ, ಹೆಚ್ಚಿದಿವಸ ಇರಲಿಲ್ಲ; ಇದ್ದರೂ ಏನುಮಾಡೂದು? ನಾನು ಹೆಂಗಸು! ಒಮ್ಮೆಲೇ ನನಗ ಯಾರು ಕೊಡವರು ? ಮನೀಬಿಟ್ಟು ಎಂದೂ ಹೊರಬಿದ್ದವಳಲ್ಲ ನಾನು. ಇನ್ನೊಬ್ಬರಿಗೆ ಬಾಯಿತಗದವಳಲ್ಲ ನಾನು. ಅಪ್ಪಾ ! ನಿಮಗ ಹೇಳತೇನಿ ನೋಡ್ರಿ; ನನ್ನ ಗಂಡ ಸತ್ತಾಗ ಕೂಡ ನನಗ ಇಷ್ಟೊಂದು ಸಂಕಟ ಆಗಿರಲಾಕಿಲ್ಲ. ಯೋಚನೀ ಮಾಡಿ ಮಾಡಿ ತಲೀ ಗಿಮಿಗಿಮಿ ತಿರಗತಿತ್ತು. ನಿದ್ದಿಯಿಲ್ಲ, ನೀರಡಕಿಯಿಲ್ಲ; ಒಂದು ತುತ್ತು ಕೂಳು ಬಾಯಾಗ ಹಾಕಿದ್ದರ ಕೆಟ್ಟ ಆಣಿ ನೋಡ್ರಿ !

ಹೊಸಮನೀ ವೀರಭದ್ರಪ್ಪನ್ನ ನೀವೂ ಬಲ್ಲಿರಿ. ಅಂವ, ಹತ್ತೀಲಿ ಒಂದು ಮೂರುನಾಕುನೂರು ರೂಪಾಯಿ ಇಟುಕೊಂಡು, ನಮ್ಮಂತಾ ಬಡವರಿಗೆ ಅಡಚನೀ ಬಂದರ ಸಾಲಾ ಕೊಡತಿರತಾನು. ದುಡ್ಡಿಗೆ ಎರಡು ದುಡ್ಡು ಬಡ್ಡೀ ವಸೂಲುಮಾಡಿ, ಹೊಟ್ಟೀ ತುಂಬಿ ಕೋತಾನು. ಆತನಿಗಾರೇ ಏನನ್ನೂದು ರಾಯರ ! ಈ ಬರಗಾಲ ದಾಗ ಹೊಟ್ಟೀ ತುಂಬಿಕೊಳ್ಳಾಕ ಏನಾದರೂ ಹಂಚಿಕೀ ಹಾಕಬೇ ಕಲಾ ! ಅಂವಗ ಹೊಲಾ ಇಲ್ಲ, ಮನೀ ಇಲ್ಲ; ನಾಕೈದು ವರಸ ಸಾಲಿಗೆ ಹೋಗಿ,ಓದು-ಬರೀ ಕಲಿತಾಂವಾ. ಕೂಲೀಕುಂಬಳೀ ಯಾಕ ಮಾಡ್ಯಾನು ! ಬಡ್ಡಿ ವೆವಹಾರಾ ಮಾಡಿ ಸಂಸಾರಾ ಸಾಗಿಸಿ ಕೊಂಡು ಆಗಾನು.

' ಮದುವೀ ಮಾಡೇ ಬಿಡು,ಅಂತ ಯಾರೋ ನನ್ನ ಕಿವಿಯಾಗ ಆಗಾಗ ಹೇಳಿದ್ಹಾಂಗ ಆಗಲಾಕ ಹತ್ತಿತು. ಮಾಡಿಬಿಡಬೇಕಂತ ನನ್ನ ಮನಸೂ ಹಂಬಲಿಸಾಕ ಹತ್ತಿತು. ತೀರಾ ಬಡತನದ ಮದುವಿ ಅಂದರೂ ಖರ್ಚಿಗೆ ಇನ್ನೂರು ರೂಪಾಯಿ ಬ್ಯಾಡs ರಾಯರ ?

ಎರಡೂ ಹೆಣ್ಣಿಗೆ ಕೂಡಿ ತೆರವು ನೂರುರೂಪಾಯಿ, ಅರಿಪಿ-ಅಂಚಡಿಗೆ ಐವತ್ತುರೂಪಾಯಿ, ಅನ್ನಖರ್ಚಿಗೆ ಐವತ್ತುರೂಪಾಯಿ.

ನನ್ನ ಗಂಡ ಇದ್ದಾಗ ವಿರಭದ್ರಪ್ಪ ನಮ್ಮ ಮನೀಗೆ ಬರತಿದ್ದ. ಅದರಿಂದ ನನಗ ಅವನ ಗುರುತು ಹೆಚ್ಚಾಗಿ ಇತ್ತು. ಆಗ ಬೇಕಾದ್ಹಾಂಗ ಸಲಗೀಲೆ ಮಾತಾಡತಿದ್ದೆ. ಆಗಿನ ಗುರುತಿನಿಂದಲೇ ನಾನು ವಿರಭದ್ರಪ್ಪನ ಹತ್ತೀಲಿ ಹೋದೆ. ಮದುವೀವಿಚಾರಾನೆಲ್ಲಾ ಹೇಳಿ, ನನಗಿರೂ ಅಡಚಣೀನೂ ತಿಳಿಸಿದೆ: ನನಗ ಹೊಲಾ ಇರೂದರಿಂದ, ಯಾರೂ ಹೆದರಿಕಿಲ್ಲದ ಸಾಲಾ ಕೊಡಬಹುದಾಗಿತ್ತು. ವಿರಭದ್ರಪ್ಪನೂ ಸಾಲಾ ಕೊಡಾಕ ಒಪಿಗೊಂಡ. ಆದರ, 'ನೂರಕ್ಕ ಒಂದು ತಿಂಗಳಿಗೆ ಹತ್ತು ರೂಪಾಯಿ ಬಡ್ಡಿ' ಅಂತ ಹೇಳಿದ. ಕೇಳಿ ನನ್ನ ಎದೀ ನಡುಗಿತು. ಆದರೂ ಮಕ್ಕಳ ಮದುವೀ ವಿಚಾರ ಎದೀನ ಗಟ್ಟಿಗೊಳಿಸಿತು. ಮನಸಿನೊಳಗs ನಾನು ಎಣಿಕೀ ಹಾಕಿದೆ. "ಈಗ ಮದುವೀ ಕೆಲಸ ಸಾಗೂ ಮಟ್ಟಿಗೆ-ಒಂದು ಹದಿನೈದು ದಿವಸ ಇವನಲ್ಲಿ ರೂಪಾಯಿ ಒಯ್ಯಬೇಕು. ಆಮ್ಯಾಗ ಯಾವನಾದರೂ ಒಬ್ಬ ಸಾವುಕಾರಗ ಹೊಲಾ ಅಡವು ಹಾಕಿ, ಕಡಿಮಿ ಬಡ್ಡೀಹಾಂಗ ಸಾಲಾ ತಂದು, ಈತನ ಸಾಲಾ ತೀರಿಸಬೇಕು."

ಇದs ಮಾತನ್ನ ವಿರಭದ್ರಪ್ಪಗ ಹೇಳಿದೆ. ಆತ "ಹದಿನೈದು ದಿನಧ ಪೂರ್ತೇನೇ ಬೇಕಾಗಿದ್ದರ, ನೂರಕ್ಕ ಒಂದು ದಿನಕ್ಕ ಎಂಟಾಣೆ ಬಡ್ಡೀಗಿಂತ ಕಡಿಮಿ ಆಗದು" ಅಂತ ಗಟ್ಟಿಮುಟ್ಟ ಮಾತನ್ನೇ ಹೇಳಿ ಬಿಟ್ಟ. ಮದುವಿಯ ವಿಚಾರವೊಂದರದs ಬೆನ್ನ ಹತ್ತಿಬಿಟ್ಟಿದ್ದರಿಂದ, ನನಗ ಬ್ಯಾರೇ ಯಾವ ವಿಚಾರಾನೂ ಹೊಳೀಲಿಲ್ಲ. ವಿರಭದ್ರಪ್ಪ ರುಪಾಯಿ ಕೊಡಲಾಕ ಒಪಿಕೊಂಡದ್ದs ನನಗೊಂದು ದೊಡ್ಡ ಉಪಕಾರಾ-ಅನಿಸಿತು. ಅಂವಾ ಹೇಳಿದ ಬಡ್ಡಿಗೆ ಒಪಿಗೊಂಡುಬಿಟ್ಟೆ. ವೀರಭದ್ರಪ್ಪ ತನ್ನ ಗೆಳೆಯರಿಬ್ಬರ ಎದುರಿಗೇನೇ ಇನ್ನೂರುರುಪಾಯಿ

ಎಣಿಸಿಕೊಟ್ಟ. ನನ್ನ ಹಿರೇ ಮಗನ ಕಡಿಂದ ಬಟ್ಟ್ಯೂರಿಸಿ ಕಾಗದಾ ಬರಿಸಿಕೊಂಡ.

ಹನ್ನೆರಡು ವರುಷದ ಚಿಂತಿಯೆಲ್ಲಾ ಅಂದ ನನಗ ಇಲ್ಲದ ಹಾಂಗ ಆತು. ಎಳದು ಎಳದು ಹಾಕತಿದ್ದ ಹೆಜ್ಜಿ, ಆವೊತ್ತು ತಾವಾಗೇ ನಡಿಲಾಕ ಹತ್ತಿದೂ. ಜಡಾ ಅನಸತಿದ್ದ ಮೈಗೆ ರೆಕ್ಕೀ ಕಟ್ಟಿದ್ಹಾಂಗ ಆತು. ನನ್ನ ಮನಸು ಒಳಗಿಂದೊಳಗs ಏನೇನೋ ಚಿತ್ತಾರಾ ನೋಡಾಕ ಸುರುಮಾಡಿತು. ಹೊಸಸೀರಿ, ಹೊಸ ಕುಪ್ಪಸ ತೊಟ್ಟುಕೊಂಡು, ಸೊಸೆಂದಿರಿಬ್ಬರೂ ಮನೆಗೆ ಬಂದ್ಹಾಂಗ; ನನ್ನ ಮನೀ ಮದಲಿನಂತೆ, ಗೋಕುಲನಗರದಂತೆ ನಗತಿದ್ಹಾಂಗ; ಮುದ್ದುಮುದ್ದಾದ ಮೊಮ್ಮಕ್ಕಳನ್ನ ಎತ್ತಿಕೊಂಡು ಮುದ್ದಾಡಿ ದ್ಹಾಂಗ; ಇವೆಲ್ಲಾ ನೋಟ ಒಂದರ ಹಿಂದ ಒಂದರಂತೆ ಮುಂದ ಬಂದು, ನಿಂತು ನಿಂತು, ಮನಸನ್ನ ಮುಗಿಲತನಕಾ ಹಾರಿಸತಿದ್ದೂ. ಲೋಕಾ ಅಂಬೂದೆಲ್ಲಾ 'ತಕತ್ಯೈ' ಅಂತ ಕುಣೀಲಾಕ ಹತ್ತೈಯ್ತೋ ಏನೋ ! ಅಂತ ನನಗ ಕಾಣತಿತ್ತು. ರಾತ್ರೀ ಮಲಗಿದಾಗ ಕನಸಿ ನೊಳಗ ಕೂಡಾ ಮಕ್ಕಳ ಮದುವಿ; ಸೊಸೆಂದಿರ ಸವಿಯಾದ ಸಂಸಾರ; ಇವೇ.

ಮದುವಿಗೆ ಮೊದಲಾತು. ಊಟ ಇತ್ತೂ–ಅಂತ ಇಲ್ಲದ ಬಳಗ ವೆಲ್ಲಾ ಕೂಡಿತು. ಯಾರುಯಾರೋ ನೀರು ತಂದರು. ಯ್ಯಾರು ಯಾರೋ ಅಡಿಗೀ ಮಾಡಿದರು. ಯಾರುಯಾರೋ ನೀಡಿದರು. ಯಾರುಯಾರೋ ಉಂಡು ತೇಗಿದರು. ಮಕ್ಕಳ ತಲೀಗೆ ಬಾಸಿಂಗ ಕಟ್ಟಿದ್ದನ್ನ ಕಂಡು, ನನ್ನ ಕಣ್ಣು ಹಬ್ಬಾಮಾಡಿದೂ. ಅವರ ತಲೀಮ್ಯಾಗ ಅಕ್ಕೀಕಾಳು ಹಾಕಿ, ಹರಕೀಕೊಟ್ಟು, ನನ್ನ ಕರುಳು ಉಂಡುತೇಗಿತು. ಮದುವಿ ಮುಗೀತು. ಊಟ ಇಲ್ಲದ್ಹಾಂಗಾತು. ಕೂಡಲೆ ನಮ್ಮ ಬಳಗನೂ ಕರಗಿ ಹೋಗಿಬಿಟ್ಟಿತು, ಎರಡು ದಿನ

ಹಿಗ್ಗಿನಿಂದ ಹಾರಾಡತಿದ್ದ ನನಗ. ಊಟಾನಽ ಬೇಕಾಗಲಿಲ್ಲ. ಸಂತಿ ನೆರೆದು ಬಯಲಾದ ಹಾಂಗ, ಮುದುವೀ ಮುಸಿ ಬಯಲಾಗಿ ಬಿಟ್ಟಿತು. ಒಂದೆರಡು ದಿನ ಸಿರಿವಂತೀಹಾಂಗ ಗರಿವನಿಂದ ತಿರುಗಾಡಿದವಳು ನಾನು, ತಿರಗಿ ಬಡತನದ ಬಲೆಯೊಳಗ ಬಿದ್ದುಬಿಟ್ಟೆ. ವೀರಭದ್ರಪ್ಪನ ಸಾಲದ ರುಪಾಯಿ, ಕಣ್ಣಮುಂದ ಬಂದು ಕುಣದಾಡಾಕಹತ್ತಿದೂ. ಈ ದಿನ ಹೋಗಿ ಮರುದಿನ ಬರೂದರೊಳಗಽ ಒಂದು ರುಪಾಯಿ ಯಂತೆ ಬೆಳಿತೀರೋ ಬಡ್ಡಿಯು ಪೂರಿ, ನನ್ನ ತಲೀನ ತಗ್ಗಿಸಿತು; ಮೈ ಯನ್ನ ಬಗ್ಗಿಸಿತು. ಹದಿನೈದು ದಿನದ ಗಡುವು ತೀರಿತು. ವೀರ ಭದ್ರಪ್ಪ ಎಚ್ಚರಿಕೀಕೊಟ್ಟು ಹೋದ. ನನಗ ಮರವು ಉಂಟಾಗಿದ್ದರ ಅವನ ಎಚ್ಚರಿಕಿ ಬೇಕು. ನನ್ನ ಮೈಯ ನರ, ರಕ್ತ, ಮಾಂಸ, ಎಲುಬುಗಳು, ಎಲ್ಲಾ—ಆತನ ಸಾಲಕ್ಕಾಗಿ ಯಾವಾಗಲೂ ಎಣಿಕೀ ಹಾಕತಿದ್ದೂ. ಒಂದರ ಎಣಿಕೀನೂ ಬಗೀಹರೀಲಿಲ್ಲ.

§ § § §

ಈ ಊರಾಗ ಸಾಲ ಬೇಕಾದವರಿಗೆಲ್ಲಾ ಬೇರೂರ ಸಾವುಕಾರರ ಕಡಿಂದ ಸಾಲಾ ಇಸದು ಕೊಡುವರು—ಅಂದರ ಶಿವಬಸಯ್ಯನವರು ಯವ್ರಾ. ಅವರ ಹತ್ತಿಲೆ ಹೋಗಿ, ಕೈಕಾಲು ಕಟ್ಟಿಕೊಂಡೆ. ಕಲ್ಲು ಕೂಡಾ ಕರಗೂಹಾಂಗ ಕಣ್ಣೀರುಸುರಿಸಿ, ನನ್ನ ಕಷ್ಟಾನೆಲ್ಲಾ ಹೇಳಿಕೊಂಡೆ. ನಾನು ಬಾಯಿ ತೆರಿಯೂದನ್ನ ಕಂಡು, ಅಯ್ಯನವರಿಗೂ ಕನಿಕರ ಬಂತೇನೋ! "ಹೊಲಾ ಬರದುಕೊಟ್ಟರ ಸಾಲಾ ಇಸದು ಕೊಡತೇನಿ" ಅಂತ ಹೇಳಿದರು. ಆದರ, ಅವರು ತಮ್ಮದೊಂದು ಒಳಗಿನ ಮಾತು ಹೇಳಿದರು. "ನೂರು ರುಪಾಯಿ ಸಾಲಾ ಕೊಡಿಸಿದರ, ಹತ್ತುರುಪಾಯಿ ನನಗ ದಲಾಲೀ ಕೊಡಬೇಕು" ಅಂಬೂದಽ ಆ ಒಳಗಿನ ಮಾತು.

ವೀರಭದ್ರಪ್ಪನ ಗಂಟು-ಬಡ್ಡಿ ಕೂಡಿ, ಅಂದಿಗೆ ಇನ್ನೂರಾಮೂವ-

ತ್ತೆರಡು ರುಪಾಯಿ ಆಗಿದ್ದೂ. ಇನ್ನೂ ಕಚೇರಿಗೆ ಹೋಗಿ, ಕಾಗದಾ ಬರಕೊಟ್ಟು ಹಣ ತರಬೇಕಾದರ, ಎಳೆಂಟು ದಿವ್ಸ ಆದರೂ ಬೇಕಾಗ ತಿದ್ದೂ. ಇಷ್ಟರ ಅಲ್ಲದ, ನನಗ ಮನ್ಯಾಗ ಉಣ್ಣಲಾಕ ಕಾಳೂ ಇರ ಲಿಲ್ಲ. ಸಾಲಾ ಒಮ್ಮೆ ತಗಿಯೋದು ತಗೀತೀವಿ, ನಾಕು ರುಪಾಯಿ ಹೆಚ್ಚಿಗೆ ತಗದು ಬಿಡೋಣಾ—ಅಂತ ಯೋಚ್ನೀ ಮಾಡಿದೆ. ಶಿವಬಸಯ್ಯಾ ನವರ ಕರಾರಿಗೆ ಒಪ್ಪಿಕೊಂಡು, ಮುನ್ನೂರಾಐವತ್ತು ರುಪಾಯಿ ಸಾಲಾ ಕೊಡನೂದಕ ಹೇಳಿಬಂದೆ.

ಹೊಲಾನ ಹಂಗನರು ಬರಸುಕೊಟ್ಟರ ನಡಿಯೂದಿಲ್ಲಂತಲ್ರಿ! ನನ್ನ ಹಿರೀಮಗಾನ್ನ ಬರದುಕೊಡಬೇಕಾಗಿತ್ತು. ಶಿವಬಸಯ್ಯಾನವರ ಕೂಡಾ ಮಾತಾಡಿ ಒಂದ ದಿನಾನ್ನ ಸಂಜೀಕಡೆ, ಗೌಡರು ನನ್ನ ಕರೀ ಕಳಿಸಿದರು. ಅದ್ಯಾಕೋ ಏನೋ—ಅಂತ ಒಳಗೊಳಗ ಬೆದರತಾ ಗೌಡರ ಮನಿಗೆ ಹೋದೆ. ಗೌಡರು, ಶಿವಬಸಯ್ಯಾನವರು ಕೂಡಿ ಕೂತಿದ್ದರು. ನಾ ಹೋದ ಕೂಡಲೇ ಗೌಡರು "ಏನು ಚಂದವ್ವಾ' ನೀಯೇನೋ ಹೊಲಾ ಬರಕೊಟ್ಟು, ಸಾವುಕಾರರ ಹತ್ತೀಲಿ ಸಾಲಾ ತರತೀ ಅಂತಾ ಕೇಳತೀನಿ. ಹಂಗನು, ನೀಬರಕೊಡಾಕಂತೂ ಬರೂ ಹಾಂಗ ಇಲ್ಲ. ಇನ್ನ ನಿನ್ನ ಮಗಾ; ಅವಗ ಇನ್ನೂ ಇಪ್ಪತ್ತೊಂದು ವರಸ ಆಗಿಲ್ಲ. ಆದರಿಂದ ಅವಗೂ ಬರಕೊಡಾಗ ಬರೂಹಾಂಗಿಲ್ಲ. ನಿನ್ನ ಮಗಾ ಸಜ್ಞಾನ ಆಗಿಲ್ಲಾ ಅಂಬೂ ಮಾತು ಸಾವುಕಾರರಿಗೆ ತಿಳದರ,ಅವರೇನೂ ಸಾಲಾ ಕೊಡೂದಕ ಒಪ್ಪಿಕೊಳ್ಳೂದಿಲ್ಲ ನೋಡು!" ಅಂತ ಹೇಳಿಬಿಟ್ಟರು. ನನಗ ಯಾವ್ದೂ ತಿಳೀದ್ಹಾಂಗ ಆತು. ಹುಚ್ಚೀ ಹಾಂಗ ಮಿಳೀಮಿಳೀ ಅವರ ಮುಖಾ ನೋಡತನ್ನ ಸುಮ್ಮನ್ನ ಕುಂತು ಬಿಟ್ಟೆ.

ಶಿವಬಸಯ್ಯಾನವರು ಅಲ್ಲಿಂದ ಎದ್ದರು. ತಲೆಬಾಗಿಲ ಹೊರಗ ಹೋಗಿ; ಸನ್ನೀಮಾಡಿ ನನ್ನ ಹೊರಗ ಕರದರು. ನಾನು ಎದ್ದು ಅವರ

ಹತ್ತೀಲಿ ಹೋದೆ. ಅಯ್ಯನವರು ನನಗೊಬ್ಬಾಕೆಗೇ ಕೇಳ್ಳೊಹಾಂಗ ಮೆಲ್ಲಕs ಹೇಳಿದರು.

"ಗೌಡರಿಗೆ ಏನಾದರೂ ಸ್ವಲ್ಪ ಕೈಬೆಚ್ಚಗ ಮಾಡಿಬಿಡು; ಅಂದರ ಅವರೆಲ್ಲಾ ಸರಿಮಾಡಿ ಕೊಡತಾರ"

"ಎಷ್ಟು ಕೊಡಬೇಕು ಅಯ್ಯನವರೇ?" ಅಂತ ನಾ ಕೇಳಿದೆ.

"ಅದನ್ನೆಲ್ಲಾ ಬೇಕಾದರ ನಾ ಗೌಡರ ಸಂಗತಿ ಮಾತಾಡಿ ಗೊತ್ತು ಮಾಡತೀನಿ. ನೀ ಈಗ ಸುಮ್ಮನs ಹೋರಟು ಬಿಡು. ಗೌಡರು ಒಳ್ಳೇಯವರು. ಮೇಲಾಗಿ ನೀ ಬಡವಿ ಅಂಬೂದು ಅವರಿಗೂ ಗೊತ್ತs ಗೊತ್ತು. ನಾನೂ ಕೈಲಾದಷ್ಟು ಹೇಳತೀನಿ; ಆದಷ್ಟು ಕಡಿಮಿ ತಕ್ಕೊಳ್ಳೊಹಾಂಗ ಹಂಚಿಕೀ ಮಾಡತೀನಿ" ಅಂತ ಅಯ್ಯನವರು ಹೇಳಿದರು. ಅವರ ಮಾತು ಕೇಳಿ, ನಾನು ಹಾಂಗs ಮನೀಗೆ ಬಂದುಬಿಟ್ಟೆ.

ಆಮ್ಯಾಲೆ ಒಂದು ಒಂದೂವರಿ ತಾಸು ಕಳದಿರಬಹುದು; ಅಯ್ಯನವರು ನಮ್ಮ ಮನೀಗೆ ಬಂದು "ಸೊಲ್ಪದರ ಮ್ಯಾಗs ಬಗೀಹರಿಸಿ ಬಿಟ್ಟಿದ್ದೀನಿ. ಗೌಡರಿಗೆ ಬರೀ ಇಪ್ಪತ್ತು ರೂಪಾಯಿ ಕೊಟ್ಟರ ಆತು. ಅವರೇನೋ ನಾಲ್ವತ್ತು ರೂಪಾಯೀ ಹೊರತು ಆಗೂದಿಲ್ಲ-ಅಂತಿದ್ರು. ನಾನs ಹಾಂಗs ಹೀಂಗs ಬಾಳಷ್ಟು ಹೇಳಿ, ಇಪ್ಪತ್ತಕ್ಕ ತಂದೆ." ಅಂತ ಹೇಳಿ, ನನ್ನ ತಲೀಮ್ಯಾಗ ಉಪಕಾರದ್ದೊಂದು ಹೊರೀನs ಹೊರಿಸಿ ಬಿಟ್ಟರು. ದಿನಕ್ಕೊಂದು ರುಪಾಯಿ ಬಡ್ಡೀ ಬೆಳಿಸಿಗೊಂತ ಕೂಡೂದ ಕಿಂತ, ಒಮ್ಮೆ ಎಷ್ಟು ಖರ್ಚ ಆಗತೆಯ್ತೋ ಆಗಿಬಿಡಲಿ; ಅಂತ ಎಲ್ಲಾ ಮಾತಿಗೂ ತಲೀಹಾಕಿಬಿಟ್ಟೆ. ಮರುದಿನಾನs ಶಿವಬಸಯ್ಯನವರು ತಮ್ಮ ಗುರುತಿನ ಸಾವುಕಾರರಿದ್ದ ಊರಿಗೆ ಹೋಗಿ, ಮಾತಾಡಿ ಕೊಂಡು ಬಂದರೇನೋ ! ಬಂದಮ್ಯಾಗ ನನಗ ಹೇಳಿದರು.

"ನೂರಕ್ಕ ವರಸಕ್ಕ ಹದಿನಾರರ ಹಾಂಗ ಬಡ್ಡಿ. ಮೂರೂವರಿ

ನೂರು ರುಪಾಯಿಗೆ ಆರು ನೂರರ ಕಾಗದಾ ಬರಕೊಡಬೇಕು. ಬರಸೂಖರ್ಚ ಎಲ್ಲಾ ಸಾಲಗಾರರೇ ನೋಡಿಕೋಬೇಕು."

* * * *

ಹೊಲಾ ಬರದು ಕೊಡೂದಕ ಎಂದ ಹೋಗೂದು – ಅಂತ ಗೊತ್ತಾತು. ಆ ದಿನಾನೂ ಬಂದುಬಿಟ್ಟಿತು. ಕಚೇರೀ ಕೆಲಸಾ ತೀರಿಸಿ ಕೊಡಾಕ ಗೌಡರನೂ ಕರಕೊಂಡು ಹೋಗಬೇಕಲ್ರಿ! ಶಿವಬಸಯ್ಯ ನವರಂತೂ ಇದ್ದವರು. ಸಾಕ್ಷೀದಾರರು ಅಂತ ಇನ್ನೂ ಇಬ್ಬರು ಹೊರಟರು. ನನ್ನ ಮನಸ್ಯಾಗೇನು ಏತ್ತು ಬಂದೇ! ಎರಡು ರುಪಾಯಿ ಕೊಡೋದು ಗೊತ್ತುಮಾಡಿ, ಒಂದು ಬಂಡೀ ಬಾಡಿಗೀ ಮಾಡಿಕೊಟ್ಟೆ. ಎಲ್ಲಾರೂ ಬಂಡೀಮ್ಯಾಲೆ ಕುಂತುಕೊಂಡು, ನಗತಾ ಕೆಲೀತಾ ನಡದರು. ಎಂದೂ ನಡದು ಗೊತ್ತಿಲ್ಲದ ನಾನು, ನನ್ನ ಮಗ ಬರಿಗಾಲಿನಿಂದ ಕಲ್ಲು ತುಳೀತಾ-ಮುಳ್ಳು ತುಳೀತಾ,ನಡದುಕೊಂಡು ಹೋದಿವಿ. ಯಪ್ಪಾ! ಬಂಡೀಮ್ಯಾಗ ಕುಂತವರು-ನನ್ನ ಬಿಡಲಿ, ನನ್ನ ಮಗನ್ನಾದರೂ ಮ್ಯಾಲ ಕರದು ಕುಂಡ್ರಿಸಿಕೊಳ್ಳಬಾರದು! ಇಬ್ಬರೂ ಕಾಲು ಎಳೀತಾ ಎಳೀತಾ ನಡದು ಒಮ್ಮೆ ಊರಿಗೆ ಹೋಗಿ ಬಿದ್ದೆವಿ.

ಕಾಗದಾ ಪಾಗದಾ ಬರಸೂದೆಲ್ಲಾ ಆತು. ಕಾಗದಕ್ಕ, ಬರದವರಿಗೆ, ಸಾಕ್ಷೀ ಹಾಕಿದವರಿಗೆ, ಸಬರಜಿಸ್ಟ್ರರಿಗೆ, ಸರಕಾರೀ ಫೀಗೆ ಎಲ್ಲಾ ಕೂಡಿ ಅಲ್ಲೇ ನನ್ನೂ ಐವತ್ತುರೂಪಾಯಿ ಖರ್ಚ ಆಗಿ ಹೋದೂ ಯಪ್ಪಾ! ಕಚೇರೀಬದೀಲೇನು ಒಂದು ಚಾದ ಅಂಗಡಿ ಐತಿರಿ. ಎಲ್ಲಾರೂ ಕೂಡಿ ಆ ಅಂಗಡಿಗೆ ಹೋದರು. "ಚಪಾತೀ ಕೊಡು, ಅವಲಕ್ಕೀ ಕೊಡು, ಅದನ್ನ ಕೊಡು, ಇದನ್ನ ಕೊಡು" ಅಂತ ಏನೇನೋ ಹದಿನೆಂಟು ಸಾಮಾನು ತರಿಸಿ ತರಿಸಿ ತಿಂದರು. ಗೌಡರು ತಮ್ಮ ಕೂಡ ಕಚೇರೀ ಸೀಪಾಯರನ್ನ ಇಬ್ಬರು – ಮೂವರನ್ನ ಕರಕೊಂಡು ಬಂದಿದ್ದರು. ರಾಯರ! ರೊಟ್ಟೀಮ್ಯಾಗ ಕಾರಾನೂ ಕಾಣ

ವಿರೋ ನಾನು, ನನ್ನ ಮಗಾ ನಿಂತುಕೊಂಡು, ಅವರು ತಿನ್ನೂ
ನೊಗಸನೆಲ್ಲಾ ಮಿಕಿಮಿಕಿ ನೋಡುತಿದ್ದ್ವಿ. ಎಲ್ಲಾರೂ ತಿಂದ ಫಳಾರದ
ಖರ್ಚು ನಾಕೂವರಿರುಪಾಯಿ ಆತು. ಆದರ ಹೊರೀನೂ ನನ್ನ ತಲೀ
ಮ್ಯಾಗಽ ಬೀಳಬೇಕಽ ಯಪ್ಪಾ! ಗೌಡರು ಬಂದರು. ನಾಕೂ
ವರೀ ರೂಪಾಯಿ ನನ್ನ ಕಡಿಂದ ಬೇಡಿ ಇಸಕೊಂಡರು. ಅಂಗಡ್ಯಾವನ
ಲೆಕ್ಕಾ ತೀರಿಸಿದರು. ನಾನು ಯಾವ ಮಾತೂನೂ ಆಡದಽ ಸುಮ್ಮನ
ಇದ್ದೆ. ಆದರ ಹೊಟ್ಯಾನ ಕರಳೆಲ್ಲಾ ಕುದ್ದ್ಯಾಂಗ ಆಗತಿದ್ದೂ
ನೋಡ್ರಿ. ಬಡತನದ ಬಾಳೇವು ಬಲು ಕೆಟ್ಟ ತಾಯೀ! ಮುಂದೀ
ಫಳಾರದ ಖರ್ಚನ್ನೆಲ್ಲಾ ನಾನೇ ಕೊಟ್ಟೆ; ಆದರ ನನ್ನ ಮಗ್ಗ ಒಂದು
ದುಡ್ಡಿನ ಚುರಮುರಿನೂ ಕೊಂಡುಕೊಡಲಿಲ್ಲ. ಮನಿಂದ ಕಟ್ಟಿ ತಂದಿರೂ
ತಂಗಳ ರೊಟ್ಟೀ ತಿಂದು, ಹೊಳೀನೀರು ಕುಡದದ್ದೆಷ್ಟೋ ಅಷ್ಟಽ
ಯಪ್ಪಾ.

ಗೌಡರಿಗೆ ಕೊಡಬೇಕಾದ ಇಪ್ಪತ್ತು ರೂಪಾಯೀನ, ತಮಗೆ
ಬರಬೇಕಾದ ಮೂವತ್ತೈದು ರುಪಾಯೀನ ಮುರಕೊಂಡು, ಮಿಕ್ಕ
ಹಣಾನಽ ಅಯ್ಯನವರು ನನ್ನ ಕಡೆ ಕೊಟ್ಟಿದ್ದರು. ತಿರಗಿ ಊರಿಗೆ
ಬಂದಕೂಡಲೆ ಬಂಡಿಯ ಬಾಡಿಗೀ ಹಣ ಮುಟ್ಟಿಸಿದೆ. ವಿರಭದ್ರಪ್ಪನ
ಗಂಟು, ಬಡ್ಡಿ ಕೂಡಿ ಅಂದಿಗೆ ಇನ್ನೂರರ ಮ್ಯಾಗ ನಾಲ್ವತ್ತೊಂದು
ರುಪಾಯಿ ಆಗಿತ್ತು. ಅವರು ಇವರು ಕೂಡಿ ಬಾಳ ಹೇಳಿದರಂತ,
ಬಡ್ಡ್ಯಾಗ ಎರಡು ರೂಪಾಯಿ ಬಿಡೂದಕ ವಿರಭದ್ರಪ್ಪ ಕಬೂಲಾದ.
ಆದರ ಏನ ಹೇಳೂದು ಅವ್ವನವರಽ! ಸಾಲಾನೆಲ್ಲಾ ತೀರಿಸಿ, ಹೊಟ್ಟಿ
ಗೇನಾದರೂ ಕಾಳು ತಗೋಬೇಕು-ಅಂತ, ಹೆಚ್ಚಿಗೆ ರೂಪಾಯಿ ಸಾಲಾ
ತಗದಿದ್ನಲ್ಲಾ! ಕಾಳೂ ಹೋತು; ಕಡೀನೂ ಹೋತು; ವಿರಭದ್ರಪ್ಪನ
ಸಾಲಾ ತೀರಿಸೂದಕ್ಕನಽ ಎರಡೂವರಿ ರೂಪಾಯಿ ಕಡಿಮಿ ಬಿದ್ದು
ಕೂತಿತು. ಕೈಯಾಗ ಇದ್ದದ್ದನ್ನೆಲ್ಲಾ ಕೊಟ್ಟೆ. ಉಳದ ಎರಡೂವರಿ

ರುಪಾಯೀ ಸಲುವಾಗಿ ವೀರಭದ್ರಪ್ಪ ಮುಂಜಾನೆ ಒಮ್ಮೆ, ಸಂಜೆಗೊಮ್ಮೆ ಎಡತಾಕೂದಕ ಸುರುಮಾಡೀದಾನು. ಇದ್ದ ಹೊಲಾ ಮುಂದೀ ಕೈವಶಾಗ ಸೇರಿತು. ಮನ್ಯಾಗ ಕಟ್ಟನಽ ಕಡದೀನಂದ್ರು ಒಂದು ಕಾಳಿಲ್ಲ. ಸಾಲಾನೂ ಪೂರಾ ಮುಟ್ಟಸೂದಕ ಆಗಲಿಲ್ಲ' ಯಪ್ಪಾ! ನೋಡ್ರಿ, ನನಗ ಮಂದಿಗೆ ಮುಕಾನಽ ತೋರಿಸದ್ಹಾಂಗ ಆಗೇತಿ......."

ಕೊನೆಯ ಮಾತನ್ನು ಹೇಳುತ್ತ ಹೇಳುತ್ತಲೆ ಚಂದಮ್ಮ ಬಿಕ್ಕಿ ಬಿಕ್ಕಿ ಅಳಲುತೊಡಗಿದಳು. ನಮ್ಮ ತಾಯಿಯ ಹೃದಯವಂತೂ ಕಣ್ಣೀರಿನ ಕೂಡ ಹೊರಕ್ಕೆಯೇ ಬಂದುಬಿಟ್ಟಿದ್ದಿತು. ನನ್ನ ಮನಸ್ಸು ಮರಳಿ ಮರಳಿ ಚಂದಮ್ಮನಿಗಾಗಿ "ಅಯ್ಯೋ! ಅಯ್ಯೋ!" ಎನ್ನುತ್ತಿದ್ದಿತು.

ಅಳುವನ್ನು ಬಿಗಿಹಿಡಿದು ಚಂದಮ್ಮ ಮತ್ತೆ ಮಾತನಾಡ ತೊಡಗಿದಳು.

"ಇಷ್ಟಕ್ಕಽ ಮುಗೀಲಿಲ್ಲ ರಾಯರಽ ನನ್ನ ಕಾಡೂ ಕಂಟಕ. ಗೌಡರಿಗೆ ನಾನು ರುಪಾಯಿ ಕೊಟ್ಟದ್ದು ಶಾನಭೋಗರಿಗೆ ಗೊತ್ತಾತೇನೋ! ಅವರು ವ್ಯಾಲಿಂದವ್ಯಾಲ ನನ್ನ ಕರೀಕಳಸತಾರು, "ಕಾಯಿದೇಕ ಬರದವನ ಕಡಿಂದಾ ಕಾಗದಾ ಬರಿಸಿಕೊಟ್ಟು ಸಾಲಾ ತಂದೀದಿ. ಇದನ್ನ ಸರಕಾರಕ್ಕ ಬರದು ತಿಳಿಸಿ, ನಿನ್ನ ಕಾಗದಾನಽ ರದ್ದ ಮಾಡಸತೀನಿ" ಅಂತ ಅಂಜಿಕೀ ಹಾಕಲಾಕ ಹತ್ತೀದಾರು. ನಾನು ಏನಾದರೂ ಕೊಡಬೇಕಂತ ಅವರಿಗೆ ಆಶೇ ಇದ್ದೀತು; ಆದರ, ನನ್ನ ಹತ್ತೀಲಿ ಏನ ಐತೀ ಅಂತ ಕೊಡಲಿ ಯಪ್ಪಾ! ನನ್ನ ಜೀವಾನಽ ಕೊಟ್ಟರ ಸರಿ!........" ಮತ್ತೆ ಚಂದಮ್ಮನ ಅಳುವು ಅಂಕೆಯನ್ನು ಮೀರಿತು. ನಮ್ಮ ತಾಯಿ ಏನೇನೋ ಹೇಳಿ ಸಮಾಧಾನ ಮಾಡಲು ತೊಡಗಿದಳು. ನಾನು ಚಂದಮ್ಮನಿಗೆ ಹೇಳಿದೆ.

"ಚಂದಮ್ಮಾ! ಶಾನುಭೋಗರ ವಿಷಯದಲ್ಲಿ ನೀನೇನೂ ಚಿಂತೆ ಮಾಡಬೇಡ. ಅವರಿಗೆ ನಾನೆಲ್ಲ ಹೇಳಿ ಸರಿಮಾಡುತ್ತೇನೆ. ವಿರಭದ್ರಪ್ಪ, ಕೊಡಬೇಕಾದ ಹಣಕ್ಕಾಗಿ ಕಾಟ ಕೊಡುತ್ತಿದ್ದಾನೆ— ಅಲ್ಲವೇ? ಇದನ್ನು ತೆಗೆದುಕೋ! ಆತನ ಸಾಲ ಮುಟ್ಟಿಸು. ನಿನಗೆ ಅನುಕೂಲವಾದಾಗ ಈ ರೂಪಾಯಿ ನನಗೆ ಮರಳಿ ಕೊಡುವೆಯಂತೆ"

ಎಂದು ಮಾತನಾಡುತ್ತಲೆ ಸೊಂಟದಲ್ಲಿ ಸಿಕ್ಕಿಸಿದ್ದ ಮೂರು ರೂಪಾಯಿಗಳನ್ನು ಚಂದಮ್ಮನ ಮುಂದೆ ಚೆಲ್ಲಿದೆ. ಆಕೆ ಅಂದು ನನ್ನನ್ನು ನೋಡಿದ ಕೃತಜ್ಞತೆಯ ಕಣ್ಣುಗಳನ್ನು ಕಂಡು, ಹಿರಿಹಿರಿ ಹಿಗ್ಗಿದೆ. "ನನ್ನಲ್ಲಿ ಮನುಷ್ಯತ್ವ ಬಿಕ್ಕವರಿಗಿಂತ ಹೆಚ್ಚಾಗಿದೆಯೆ!" ಎಂದು ಒಂದು ವಿಧದ ಹೆಮ್ಮೆಯಿಂದ ಉಬ್ಬಿದೆ. ಚಂದಮ್ಮ ಬೇಡ ವೆಂದು ಮೊದಲು ಮೊದಲು ಹಟ ಹಿಡಿದಳು. ನಾನು, ತಾಯಿ ಕೂಡಿ ತೆಗೆದುಕೊಳ್ಳೆಂದು ಒತ್ತಾಯಪಡಿಸಿದೆವು. ಇದರಿಂದ ವಿರಭದ್ರಪ್ಪನ ತೊಂದರೆಯಾದರೂ ತಪ್ಪೀತು;—ಎಂದು ಆಕೆಗೂ ಎನ್ನಿಸಿತೇನೋ! ರೂಪಾಯಿ ತೆಗೆದುಕೊಂಡಳು. ನಾನು ಮನಸ್ಸಿನಲ್ಲಿಯೇ ಯೋಚಿಸಿದೆ.

"ವಿರಭದ್ರಪ್ಪನ ಕಾಟವೊಂದು ತಪ್ಪಿದರೇನಾಯಿತು. ಈಕೆಯ ಹೊಟ್ಟೆಯ ಯೋಚನೆಯನ್ನು ಬಿಡಿಸುವ ಬಗೆ ಹೇಗೆ? ನಾನು ಹಣ ಗಾರನಾಗಿದ್ದರೆ ಚೆನ್ನಾಗಿತ್ತು. ನನ್ನ ಹೊರೆಯೇ ನನಗೆ ಬೇಕಾದಷ್ಟು ಇರುವಾಗ, ಮಂದಿಯ ಹೊರೆಗೆ ತಲೆ ಕೊಡುವುದಾದರೂ ಹೇಗೆ?"

* * * *

ಮರುದಿನ ಬೆಳಗಿನಲ್ಲಿಯೇ ಶಾನುಭೋಗರ ರಂಗಣ್ಣ ನಮ್ಮ ಮನೆಗೆ ಬಂದ. ನಾನು, ರಂಗಣ್ಣ ಕೂಡಿ ಆಡಿದವರು. ಈಗಲೂ ನಮ್ಮಿಬ್ಬರಲ್ಲಿ ಸಲುಗೆ ಹೆಚ್ಚು. ಚಂದಮ್ಮನ ಸಲುವಾಗಿ ಅವನ ಬಳಿಯಲ್ಲಿ ಮಾತು ತೆಗೆದೆ. ರಂಗಣ್ಣ ನನ್ನ ಮಾತನ್ನು ಒಪ್ಪಿಕೊಂಡು, ಆ ಮೇಲೆ ಒಂದು ಮಾತನ್ನು ಹೇಳಿದ.

" ಕಿಟ್ಟಾ! ಬಡವರ ಸಲುವಾಗಿ ನನಗೇನು ಮರುಕ ಇಲ್ಲ.... ಅಂತೀಯೇನು! ನಾನಾದರೂ ಏನು ಮಾಡಬೇಕು? ನೀನೇ ನೋಡು. ನಮ್ಮ ಈ ಶಾನಭೋಗಗಿರಿ ಬಲು ಹಾಳು ಕೆಲಸ. ಮುಲಕೀ ಸಿಪಾಯಿ, ಪೈಲೀಕಾರಕೂನರನ್ನು ಮೊದಲುಮಾಡಿಕೊಂಡು, ಕಲೆಕ್ಟರ್ ಸಾಹೇಬರವರೆಗೂ 'ಸರಬರಾಯಿ' ಮಾಡಬೇಕಾಗುತ್ತದೆ. ಅದನ್ನೆಲ್ಲಾ ನಮ್ಮ ಮನೆಯ ವೆಚ್ಚದಿಂದ ಮಾಡಲುತೊಡಗಿದರೆ, ಹೊಲಮನೆ ಮಾರಿಕೊಂಡು, ಮೈಗೆ ಬೂದಿ ಬಳಿದುಕೊಳ್ಳುವ ಪ್ರಸಂಗ ಬರುತ್ತದೆ. 'ಸರಬರಾಯಿ' ಮಾಡದಿದ್ದರೆ ನಮ್ಮ ಕೆಲಸ, ಗಾಳಿಯಲ್ಲಿ ಹಿಡಿದ ದೀಪ. ಎಂತಲೇ ಏನೇನೋ ಹೆದರಿಕೆ ಬೆದರಿಕೆ ಹಾಕೋದು; ರೈತರ ಕಡೆಯಿಂದ ಹಣ ಉಚ್ಚಿಕೊಳ್ಳೋದು. ಹೀಗೆ ಮಾಡದಿದ್ದರೆ ನಮ್ಮ ಸಂಸಾರ ಹೇಗೆ ಸಾಗಬೇಕು ನೋಡು."

ರಂಗಣ್ಣನ ಮಾತಿಗೆ ನಾನೇನು ಹೇಳಬೇಕೆಂಬುದು ನನಗೆ ತಿಳಿಯದೆ ಹೋಯಿತು. ಅದೇತಕ್ಕೆಂದರೆ, ಆತನ ಹೃದಯ ನನಗೆ ಮೊದಲಿನಿಂದಲೂ ಗೊತ್ತು. ತುಂಬ ಸಂಸ್ಕಾರ ಹೊಂದಿದ ಮನಸ್ಸು, ಬಡತನೆಯವರ ದುಃಖವನ್ನು ಕಂಡು ಕರಗಿ ಕೊರಗುವಂತಹ ಕರುಳು— ಆತನದು.

